# ರಾಕ್ಷಸನ ಮುದ್ರಿಕೆ

ವಿಶಾಖದತ್ತನ 'ಮುದ್ರಾರಾಕ್ಷಸ ನಾಟಕ'ದ
ರೂಪಾಂತರ

ತೀ. ನಂ. ಶ್ರೀಕಂಠಯ್ಯ



ಮೈಸೂರು:
ಕಾವ್ಯಾಲಯ
೧೯೪೭

# ಅರಿಕೆ

ವಿಶಾಖದತ್ತನ ನಾಟಕದ ಸವಿಯನ್ನು ನಾನು ಮೊದಲು ಅರಿತದ್ದು 'ಮುದ್ರಾಮಂಜೂಷ' ದ ಮೂಲಕ. ಈ ಗ್ರಂಥದಲ್ಲಿ ಕೆಂಪುನಾರಾಯಣನು ಸಂಸ್ಕೃತ 'ಮುದ್ರಾರಾಕ್ಷಸ ನಾಟಕ'ದ ತಿರುಳನ್ನು ಸಂಗ್ರಹಿಸುವುದರ ಜೊತೆಗೆ ಅದರ ಪೂರ್ವಕಥೆಯನ್ನೂ ವಿಸ್ತರಿಸಿ, ಓದುಗರ ಮನಸ್ಸನ್ನು ಸೆರೆಹಿಡಿಯುವ ಒಳ್ಳೆಯ ಗದ್ಯಕಥೆಯೊಂದನ್ನು ಕನ್ನಡಿಗರಿಗೆ ಒದಗಿಸಿ ಕೊಟ್ಟಿದ್ದಾನೆ. 'ಮುದ್ರಾಮಂಜೂಷ'ವು ನಿಜವಾಗಿ ಕನ್ನಡದ ಮೊದಲ ನೆಯ ಕಾದಂಬರಿ—ಇಂಗ್ಲಿಷಿನ ಸಂಪರ್ಕವಿನ್ನೂ ಕನ್ನಡಕ್ಕೆ ತಟ್ಟದಿದ್ದಾಗಲೇ ಹುಟ್ಟಿದ ಐತಿಹಾಸಿಕ ಕಾದಂಬರಿ. ಚಾಣಕ್ಯ ರಾಕ್ಷಸರ ತಂತ್ರ ಪ್ರತಿತಂತ್ರಗಳ ಕಥೆಯನ್ನು ಇದರಲ್ಲಿ ಓದಿ ಮನಮುಳುಗುವ ಸುಯೋಗ ನನಗೆ ಚಿಕ್ಕಂದಿನಲ್ಲೇ ಲಭಿಸಿತು. ಅಲ್ಲಿಂದೀಚೆಗೆ ಮೂಲಕೃತಿಯನ್ನೂ ಓದಿದೆನು ; ಹಿಂದೆ ಮೂಡಿದ್ದ ಮೆಚ್ಚಿಕೆ ಇನ್ನಷ್ಟು ಬಲಿಯಿತು.

'ಮುದ್ರಾರಾಕ್ಷಸ'ವು ಸಂಸ್ಕೃತ ನಾಟಕ ವಾಙ್ಮಯದಲ್ಲಿ ಒಂದು ಅಪೂರ್ವವಾದ ಕೃತಿ. ಐತಿಹಾಸಿಕವೆಂದೇ ತೋರುವ ಪ್ರಾಚೀನ ಘಟನೆಯೊಂದನ್ನು ಅವಲಂಬಿಸಿ ವಿಶಾಖದತ್ತನು ಇದರ ಕಥೆಯನ್ನು ಬೆಳಸಿದ್ದಾನೆ. ಈ ನಾಟಕದಲ್ಲಿ ನಾಯಿಕೆಯಿಲ್ಲ, ವಿದೂಷಕನಿಲ್ಲ. ನಾಯಿಕೆಯ ವಿಷಯ ಹಾಗಿರಲಿ ; ಒಬ್ಬಿಬ್ಬರು ಗೌಣವ್ಯಕ್ತಿಗಳನ್ನು ಬಿಟ್ಟರೆ ಸ್ತ್ರೀ ಪಾತ್ರಗಳೇ ಇಲ್ಲ. ಶೃಂಗಾರ ಹಾಸ್ಯಗಳ ನೆರವಿಲ್ಲದ ವೀರರಸವೇ ಇಲ್ಲಿ ಪ್ರಧಾನ. ಈ ವೀರ ಕೂಡ ವಿಶೇಷ ರೀತಿಯದು. ಕಥೆಯ ವಸ್ತು ಕೇವಲ ರಾಜಕೀಯತಂತ್ರ; ಇಲ್ಲಿ ಉದ್ದಕ್ಕೂ ಕಾಣಬರುವುದು ಆಯುಧಗಳ ಘರ್ಷಣವಲ್ಲ, ಬುದ್ಧಿಗಳ ಘರ್ಷಣ. ಆದರೆ ಇದರ ನಿರೂಪಣೆಯಲ್ಲೇ ಅತಿಶಯ ಸ್ವಾರಸ್ಯವನ್ನು ವಿಶಾಖದತ್ತನು ಒದಗಿಸುತ್ತಾನೆ. ಚಂದ್ರಗುಪ್ತನ ಪರಮಶತ್ರುವಾಗಿ, ಅವನನ್ನು ಕೊಲ್ಲಿಸ ಬೇಕೆಂದು ಹವಣಿಸುತ್ತಿದ್ದ ರಾಕ್ಷಸನು ಕಡೆಯಲ್ಲಿ ಅವನಿಗೇ ಅಮಾತ್ಯನಾಗಿ

ನಿಲ್ಲಲು ಒಪ್ಪುವಂತೆ ಮಾಡುವುದೇ ಇಲ್ಲಿ ಚಾಣಕ್ಯನ ಉದ್ದೇಶ. ಇದಕ್ಕಾಗಿ ಅವನು ತಂತ್ರಗಳನ್ನು ಹೇಗೆ ಹೂಡುತ್ತಾನೆ; ತನ್ನ ಗೂಢಚಾರರನ್ನು ಎಡೆಯರಿತು ನಿಲ್ಲಿಸಿ, ಸಮಯವರಿತು ನಿಯೋಜಿಸಿ, ರಾಕ್ಷಸನ ಹೃದಯ ವನ್ನು ಹೇಗೆ ಆಕ್ರಮಿಸುತ್ತಾನೆ; ರಾಕ್ಷಸನ ಮಿತ್ರಸ್ನೇಹವನ್ನೇ ಮುಖ್ಯ ಸಾಧನವಾಗಿ ಉಪಯೋಗಿಸಿಕೊಂಡು ಅವನು ತನ್ನ ಕೈಗೆ ಬೀಳುವಂತೆ ಘಟನೆಗಳ ಜಾಲವನ್ನು ಹೇಗೆ ಹೆಣೆಯುತ್ತಾನೆ—ಇದೆಲ್ಲವನ್ನೂ ಈ ನಾಟಕ ದಲ್ಲಿ ಕುತೂಹಲದಿಂದ, ವಿಸ್ಮಯದಿಂದ ನೋಡುತ್ತೇವೆ. ಕಥಾಂಶಗಳೂ ಸಂವಾದಗಳೂ ಒಂದರೊಡನೊಂದು ಬಿಗಿಯಾಗಿ ಹೊಂದಿಕೊಂಡು ಅತ್ತಿತ್ತ ಅಲ್ಲಾಡದೆ ಒಂದೇ ಗುರಿಯನ್ನು ಹಿಡಿದು ಮುಂದೆ ಸಾಗುತ್ತವೆ. ಇನ್ನೊಂದು ವಿಷಯ. ಹಿಡಿದ ಉದ್ದೇಶವನ್ನು ಸಾಧಿಸಲು ಹುಸಿ ಹೇಳ ಬಹುದು, ವಂಚನೆಮಾಡಬಹುದು, ಕೊಲೆಗೂ ಕೈಹಾಕಬಹುದು: ಇದೆ ಲ್ಲವೂ ರಾಜನೀತಿಯೇ; ಬುದ್ಧಿ ಹರಿತವಾಗಿಲ್ಲದಿರುವುದೊಂದೇ ಅನೀತಿ—ಹೀಗೆಂದು ಇಲ್ಲಿಯ ಆವರಣದಲ್ಲಿ ತೋರಿದರೂ ನಾಟಕದ ನೀತಿ ಮಾತ್ರ ಇದಲ್ಲ. ಈ ಕೌಟಿಲ್ಯಮಯವಾದ ರಾಜಕೀಯ ಜಗತ್ತಿನಲ್ಲಿ ಕೂಡ, ಕೆಸರಿ ನಲ್ಲಿ ಕಮಲ ಅರಳಿ ಸೌರಭವನ್ನು ಬೀರುವಂತೆ, ಸರ್ವನಾಶವನ್ನೂ ಲೆಕ್ಕಿಸದ ಸ್ನೇಹನಿಷ್ಠೆ ವಿಕಾಸಗೊಂಡು ನಾಟಕಕ್ಕೆ ಉದಾತ್ತತೆಯನ್ನುಂಟುಮಾಡಿದೆ. ಚಂದನದಾಸನ ಪಾತ್ರವನ್ನು ವಿಶಾಖದತ್ತನು ನಿರ್ಮಿಸಿ ಅಕುಟಿಲಸ್ನೇಹದ ಮುಂದೆ ಎಲ್ಲ ರಾಜಕೀಯ ಸಿದ್ಧಿಗಳೂ ಅಲ್ಪವೆಂಬುದನ್ನು ಮನಗಾಣಿ ಸಿದ್ದಾನೆ. ಮೈತ್ರಿಯ ವಿಜಯವೇ 'ಮುದ್ರಾರಾಕ್ಷಸ'ದ ಹೃದಯವೆನ್ನ ಬಹುದೋ ಏನೋ.

ಈ ನಾಟಕವನ್ನು ಇಂದಿನ ರಂಗಭೂಮಿಯ ಮೇಲೆ ಅಭಿನಯಿಸಲು ಅನುಕೂಲವಾಗುವಂತೆ ಕನ್ನಡಕ್ಕೆ ತಿರುಗಿಸಬೇಕೆಂದು ನನಗೆ ಸಲಹೆ ಕೊಟ್ಟವರು ದಿವಂಗತ ಪ್ರೊ|| ಟಿ. ಎಸ್. ವೆಂಕಣ್ಣಯ್ಯನವರು. ಇದರಲ್ಲಿ ಮೊದಲಿನಿಂದಲೂ ನನಗಿದ್ದ ಆಸಕ್ತಿ ಅವರ ಪ್ರೇರಣೆಯಿಂದ ಇನ್ನಷ್ಟು ಹುರುಪೇರಿತು. ಮೂಲನಾಟಕವನ್ನು ಯಥಾವತ್ತಾಗಿ, ಪದ್ಯಕ್ಕೆ ಪದ್ಯ ಗದ್ಯಕ್ಕೆ ಗದ್ಯ—ಈ ರೀತಿಯಲ್ಲಿ ಭಾಷಾಂತರಿಸುವುದರಿಂದ ನಮ್ಮ

ಮುಖ್ಯೋದ್ದೇಶ ನೆರವೇರುವಂತೆ ನನಗೆ ತೋರಲಿಲ್ಲ. (ಇದರ ಮೇಲೆ, ಈ ರೀತಿಯ ಅನುವಾದವನ್ನು ದಿವಂಗತ ಆಸ್ಥಾನ ಮಹಾವಿದ್ವಾನ್ ಮೋಟ ಗಾನಹಳ್ಳಿ ರಾಮಶೇಷಶಾಸ್ತ್ರಿಗಳು ಆಗಲೇ ರಚಿಸಿದ್ದುದರಿಂದ ಆ ಕಾರ್ಯ ವನ್ನು ಮತ್ತೆ ಕೈಕೊಳ್ಳಬೇಕಾದ ಆವಶ್ಯಕತೆಯೂ ಕಾಣಿಸಲಿಲ್ಲ.) 'ಮುದ್ರಾ ರಾಕ್ಷಸ'ದ ಸ್ವಾರಸ್ಯವಿರುವುದು ಮುಖ್ಯವಾಗಿ ಅದರ ಬಿಕ್ಕಟ್ಟಾದ ಸಂವಿ ಧಾನದಲ್ಲಿ, ಮಾತಿಗೆ ಮಾತು ಮಸೆದು ಕಿಡಿ ಸಿಡಿಯುವ ಸಂವಾದದಲ್ಲಿ, ಬುದ್ಧಿಯ ಹೋರಾಟದಲ್ಲಿ; ಅದರ ಕವಿತ್ವದ ಸೊಬಗಿನಲ್ಲಲ್ಲ. ಸಂಸ್ಕೃತ ನಾಟಕದ ಸಂಪ್ರದಾಯದಂತೆ ಇದರಲ್ಲಿ ಗದ್ಯಪದ್ಯಗಳೆರಡೂ ಬಂದಿದ್ದರೂ, ಒಟ್ಟುಕೃತಿಯನ್ನು ಅಷ್ಟು ಪ್ರೌಢವೂ ಅಷ್ಟು ಶಿಥಿಲವೂ ಅಲ್ಲದ ಗದ್ಯದಲ್ಲಿ ಅನುವಾದಮಾಡುವುದೇ ಉಚಿತವೆನ್ನಿಸಿತು. ಅತ್ಯಗತ್ಯವಾದ ನಾಲ್ಕಾರು ಕಡೆಗಳಲ್ಲಿ ಮಾತ್ರ ಪದ್ಯರೂಪವನ್ನು ಉಳಿಸಿಕೊಂಡು, ನಾಟಕದ ಕ್ರಿಯೆಗೆ ಅಡ್ಡಿಯಾಗುವಂತೆ ತೋರಿದ ಕೆಲವು ಪದ್ಯಗಳನ್ನು ಕೈಬಿಟ್ಟು, ಉಳಿದವುಗಳ ತಿರುಳನ್ನು ಗದ್ಯದಲ್ಲಿಯೇ ಕೊಟ್ಟಿದ್ದೇನೆ. ವಿಷಯ ವಿನ್ಯಾಸದಲ್ಲಿಯೂ ಕೆಲವು ಮಾರ್ಪಾಡುಗಳನ್ನು ಮಾಡುವುದು ಅಗತ್ಯವಾಯಿತು. ಮೂಲ ನಾಟಕದ ಪ್ರಾರಂಭದಲ್ಲಿ ಬರುವ ಚಾಣಕ್ಯನ ದೀರ್ಘವಾದ ಸ್ವಗತ ಭಾಷಣವನ್ನು ತೆಗೆದುಹಾಕಿ, ಚಾಣಕ್ಯ ಚಂದ್ರಗುಪ್ತರ ಸಂವಾದದಿಂದ ಕಥಾಮುಖವು ವಿಶದವಾಗುವಂತೆ ಕಲ್ಪಿಸಿದ್ದೇನೆ. ಮುಂದೆ ಕೂಡ, ರಾಕ್ಷಸನ ಕೆಲವು ಸ್ವಗತಗಳನ್ನು ಸಂಗ್ರಹಿಸಿದ್ದೇನೆ. ಅಭಿನಯಕ್ಕೆ ಅನುಕೂಲಿಸದಿದ್ದ ಕೆಲವು ಅಮುಖ್ಯ ಭಾಗಗಳನ್ನು ಕೈಬಿಟ್ಟಿದ್ದೇನೆ, ಅಥವಾ ಬೇರೆಯ ರೀತಿಯಲ್ಲಿ ತಂದಿದ್ದೇನೆ. ಇಲ್ಲಿ ಒಂದು ಹೆಸರು, ಅಲ್ಲಿ ಒಂದು ಸಂಗತಿ—ಇವನ್ನು ತಿದ್ದಿರುವುದುಂಟು, ಸೇರಿಸಿರುವುದೂ ಉಂಟು. ಹೀಗೆ ಸಣ್ಣಪುಟ್ಟ ವ್ಯತ್ಯಾಸಗಳನ್ನು ಉದ್ದಕ್ಕೂ ಮಾಡುತ್ತಾ ಹೋಗಿರು ವುದರಿಂದಲೂ ಮೂಲ ನಾಟಕದ ಎಷ್ಟೋ ಭಾಗಗಳನ್ನು ಅಕ್ಷರಶಃ ಭಾಷಾಂತರಿಸದೆ ಸಂದರ್ಭೋಚಿತವಾಗಿ ರೂಪಾಂತರಿಸಿರುವುದರಿಂದಲೂ, ಈ ಕನ್ನಡ ಕೃತಿಗೆ ಮೂಲದ ಹೆಸರನ್ನೇ ಇಟ್ಟರೆ ಇದು ವಿಶಾಖದತ್ತನ ಕೃತಿಯ ಅಚ್ಚಳಿಯದ ಪ್ರತಿಬಿಂಬವೆಂಬ ತಪ್ಪು ಭಾವನೆ ಉಂಟಾದೀ

ತೆಂದು ತೋರಿತು. ಆದಕಾರಣ ಹೆಸರನ್ನೂ ಸ್ವಲ್ಪಮಟ್ಟಿಗೆ ತಿರುಗಿಸಿ 'ರಾಕ್ಷಸನ ಮುದ್ರಿಕೆ' ಎಂದು ಕರೆದಿದ್ದೇನೆ. ಇಷ್ಟಾದರೂ ಮೂಲ ಕೃತಿಯ ವಸ್ತುಪಾತ್ರಾದಿಗಳಲ್ಲಿ ಹೆಚ್ಚಿನ ವೈಪರೀತ್ಯವೇನನ್ನೂ ಉಂಟು ಮಾಡಿಲ್ಲವೆಂದು ನನ್ನ ನಂಬಿಕೆ; ವಿಶಾಖದತ್ತನ ಶಕ್ತಿಯನ್ನೂ ಅವನ ನಾಟಕದ ವೈಶಿಷ್ಟ್ಯವನ್ನೂ ಈ ರೂಪಾಂತರದಲ್ಲೂ ಕನ್ನಡಿಗರು ತಕ್ಕ ಮಟ್ಟಿಗೆ ಕಾಣಲೆಂದು ನನ್ನ ಹಾರೈಕೆ.

'ರಾಕ್ಷಸನ ಮುದ್ರಿಕೆ'ಯನ್ನು ಬರೆದು, ಅದರ ಪ್ರೇರಕರಾದ ಶ್ರೀಮಾನ್ ವೆಂಕಣ್ಣಯ್ಯನವರಿಗೆ ಶ್ರುತಪಡಿಸಿ ಇಲ್ಲಿಗೆ ಹನ್ನೊಂದು ವರ್ಷ ವಾಯಿತು. ಅಚ್ಚಾದ ಪ್ರತಿಯನ್ನು ಅವರಿಗೆ ಒಪ್ಪಿಸುವ ಭಾಗ್ಯ ನನ್ನ ದಾಗಲಿಲ್ಲ; ಒಂದಲ್ಲ ಒಂದು ಕಾರಣದಿಂದ ಪುಸ್ತಕವು ಹಸ್ತಪ್ರತಿಯಲ್ಲೇ ಬಹುಕಾಲ ಉಳಿಯಿತು. ಆ ಸೆರೆಯಿಂದ ಇದನ್ನು ಬಿಡಿಸಿ ಬೆಳಕಿಗೆ ತಂದ ವರು ನನ್ನ ಮಿತ್ರರಾದ ಶ್ರೀಮಾನ್ ಕೂಡಲಿ ಚಿದಂಬರಂ ಅವರು. ಇದು ಅವರ 'ವಿಚಾರವಾಹಿನಿ'ಯ ಸಂಚಿಕೆಗಳಲ್ಲಿ ಮೊದಲು ಅಚ್ಚಾಯಿತು. ಈಗ ಪುಸ್ತಕರೂಪದಲ್ಲಿ ಹೊರಡಿಸುವ ಸಾಹಸವನ್ನೂ ಅವರೇ ಕೈಕೊಂಡಿ ದ್ದಾರೆ. ಅವರಿಗೆ ನನ್ನ ಹೃತ್ಪೂರ್ವಕವಾದ ವಂದನೆಗಳು. ಈ ನಾಟಕ ವನ್ನು ವಿಶ್ವಾಸವಿಟ್ಟು ಓದಿ ತಿದ್ದುಪಡಿಗಳನ್ನು ಸೂಚಿಸಿ ಸಲಹೆಗಳನ್ನು ಕೊಟ್ಟು ಮಿತ್ರರನೇಕರು ಉಪಕಾರ ಮಾಡಿದ್ದಾರೆ. ಅವರಲ್ಲಿ ಶ್ರೀಯುತರಾದ ಎ. ಎನ್. ಮೂರ್ತಿರಾಯರು, ಜಿ. ಹನುಮಂತರಾಯರು, ಡಿ. ಎಲ್. ನರಸಿಂಹಾಚಾರ್ಯರು—ಈ ಮೂವರ ಹೆಸರನ್ನಾದರೂ ಇಲ್ಲಿ ಎತ್ತಿ ಹೇಳಿ ದಲ್ಲದೆ ಮನಸ್ಸಿಗೆ ನೆಮ್ಮದಿಯಿಲ್ಲ. ನನ್ನಿಂದ ಆದ ತಡ ತೊಂದರೆಗಳನ್ನು ಸಹಿಸಿಕೊಂಡು ಗ್ರಂಥವನ್ನು ಅಂದವಾಗಿ ಅಚ್ಚುಮಾಡಿಕೊಟ್ಟಿರುವ ವೆಸ್ಲಿ ಮುದ್ರಣಾಲಯದವರನ್ನೂ ಇಲ್ಲಿ ಕೃತಜ್ಞತೆಯಿಂದ ಸ್ಮರಿಸುತ್ತೇನೆ.

ಮೈಸೂರು,
೬—೭—೧೯೪೩.

ತೀ. ನಂ. ಶ್ರೀ.

# ಪಾತ್ರಗಳು

ಚಾಣಕ್ಯ

ಶಾರ್ಙ್ಗರವ, ಉದ್ದಾಲಕ (ಚಾಣಕ್ಯನ ಶಿಷ್ಯರು)

ಸಿದ್ಧಾರ್ಥಕ, ಸಮಿದ್ಧಾರ್ಥಕ, ನಿಪುಣಕ (ಚಾಣಕ್ಯನ ಗೂಢಚಾರರು)

ಚಂದ್ರಗುಪ್ತ

ಜಯಸೇನ (ಚಂದ್ರಗುಪ್ತನ ಕಂಚುಕಿ)

ಶೋಣೋತ್ತರೆ (ಚಂದ್ರಗುಪ್ತನ ಪ್ರತೀಹಾರಿ)

ರಾಕ್ಷಸ

ಶಕಟದಾಸ (ರಾಕ್ಷಸನ ರಾಯಸದವನು)

ವಿರಾಧಗುಪ್ತ, ಕರಭಕ (ರಾಕ್ಷಸನ ಗೂಢಚಾರರು)

ಪ್ರಿಯಂವದಕ (ರಾಕ್ಷಸನ ಚಾರ)

ಚಂದನದಾಸ (ರಾಕ್ಷಸನ ಪ್ರಿಯಮಿತ್ರ)

ಚಂದನದಾಸನ ಹೆಂಡತಿ

ಚಂದನದಾಸನ ಮಗ

ಮಲಯಕೇತು

ಜಾಜಲಿ (ಮಲಯಕೇತುವಿನ ಕಂಚುಕಿ)

ವಿಜಯೆ (ಮಲಯಕೇತುವಿನ ಪ್ರತೀಹಾರಿ)

ಕ್ಷಪಣಕ ಜೀವಸಿದ್ಧಿ

ಭಾಗುರಾಯಣ

ಭದ್ರಭಟ (ಒಬ್ಬ ಸೇನಾಪತಿ)

ಜೀರ್ಣೋದ್ಯಾನದ ಪುರುಷ

ವಸಂತಕ, ಚತುರಕ (ಚಂದ್ರಗುಪ್ತನ ಆಸ್ಥಾನದ ವೈತಾಳಿಕರು)

ನಗರಾಧಿಕಾರಿ, ಚಾರರು, ಕಾವಲುಗಾರರು, ಸಂಗೀತಗಾರರು

ಇತ್ಯಾದಿ

# ರಾಕ್ಷಸನ ಮುದ್ರಿಕೆ

---

## ಮೊದಲನೆಯ ಅಂಕ

### ನಾಂದಿ

" ಧನ್ಯೆ ಯಾರಿವಳು ನಿನ್ನಯ ಮುಡಿಯನಡರಿಹಳು ? "
" ಶಶಿಲೇಖೆ." " ಇದುವೆ ಏನಿವಳ ಹೆಸರು ? "
" ಇವಳ ಹೆಸರಿದೆ ತಾನೆ! ಅದನು ನೀನೂ ಬಲ್ಲೆ ;
ಯಾವ ಕಾರಣದಿಂದ ಮರೆತುಹೋಯ್ತು ? "
" ಹೆಣ್ಣ ಕೇಳಿದೆನು ; ಚಂದ್ರನನಲ್ಲ." " ಚಂದ್ರನನು
ನಂಬದಿರೆ, ಕೆಳದಿ ವಿಜಯೆಯೆ ಹೇಳಲಿ."
—ಇಂತು ದೇವಿಗೆ ಹರನು ಗಂಗೆಯನು ಮರೆಮಾಜ-
ಲೆಸಗಿದಾ ಕೌಟಿಲ್ಯ ಕಾಹು ನಿಮಗೆ.

### ದೃಶ್ಯ : ೧

(ಕುಸುಮಪುರದಲ್ಲಿ ಚಾಣಕ್ಯನ ಕುಟೀರ. ಅದರ ಒಳಅಂಗಳದಲ್ಲಿ ಚುಂಚಿನ ಕೆಳಗೆ ವೇದಿಕೆಯ ಮೇಲೆ ಎರಡು ವೇತ್ರಾಸನಗಳು. ಒಂದು ಪಕ್ಕದಲ್ಲಿ ಶಿಷ್ಯ ಶಾರ್ಙ್ಗರವನು ದರ್ಭೆಯ ಕಟ್ಟನ್ನು ಮುಂದಿಟ್ಟುಕೊಂಡು ದರ್ಭೆಗಳನ್ನು ಸರಿಯಾಗಿ ಜೋಡಿಸುತ್ತಿರುವನು. ಚಾರನೊಬ್ಬನು ಯಮಲೋಕದ ದೃಶ್ಯಗಳನ್ನು ತೋರಿಸುವ ಚಿತ್ರಪಟಗಳನ್ನು ಹಿಡಿದುಕೊಂಡು ಹಾಡುತ್ತಾ ಪ್ರವೇಶಿಸುವನು.)

ಚಾರ— ತಡೆಯದೆ ಬಾಗಿರಿ ಯಮನಿಗೆ ಜನರೇ
ಬಿಡಿ ಪರದೈವದ ಗೊಡವೆಯನು.
ಪರದೇವತೆಗಳ ಭಕ್ತರ ಪ್ರಾಣವ
ಹರಿಸಿ ಬಿಡುವನೀ ಜವರಾಯ.
ಕ್ರೂರನಾದರೂ ಭಕ್ತಿಗೆ ಸಿಲುಕುತ
ಸೇರಿದ ಭಜಕರ ಸಲಹುವನು.

ಲೋಕವನೆಲ್ಲಾ ನುಂಗುವ ಯಮನೇ
ಸಾಕುವನೆನ್ನ ಕುಟುಂಬವನು.
ತಡೆಯದೆ ಬಾಗಿರಿ ಯಮನಿಗೆ ಜನರೇ
ಜಿಡಿ ಪರದೈವದ ಗೊಡವೆಯನು.

(ಹಾಡಿಕೊಳ್ಳುತ್ತಾ ಹತ್ತಿರಕ್ಕೆ ಬರುವನು.)

ಶಾರ್ಙ್ಗರವ—(ಕತ್ತೆತ್ತಿ ನೋಡಿ) ಯಾರಪ್ಪಾ ಅದು? ಒಳಕ್ಕೆ ನುಗ್ಗಬೇಡ.

ಚಾರ—(ನಿಂತು) ಅಯ್ಯಾ ಬ್ರಾಹ್ಮಣ, ಇದು ಯಾರ ಮನೆ?

ಶಾರ್ಙ್ಗರವ—ನಮ್ಮ ಉಪಾಧ್ಯಾಯರು ಆರ್ಯ ಚಾಣಕ್ಯರ ಮನೆ.

ಚಾರ—ಓಹೋ ಸರಿ! ನನ್ನ ಸ್ವಂತ ಧರ್ಮಸಹೋದರನ ಮನೆಯೇ ಆಯಿತು. ಹಾಗಾದರೆ ಒಳಕ್ಕೆ ಬಿಡು. ನಿನ್ನ ಉಪಾಧ್ಯಾಯರಿಗೆ ಯಮಲೋಕದ ಪಟಗಳನ್ನು ತೋರಿಸಿ ಧರ್ಮೋಪದೇಶ ಮಾಡುತ್ತೇನೆ.

ಶಾರ್ಙ್ಗರವ—(ಕೋಪದಿಂದ) ಏನೆಂದೆ, ಮೂರ್ಖ! ನಮ್ಮ ಉಪಾಧ್ಯಾಯರಿಗಿಂತಲೂ ಧರ್ಮ ಬಲ್ಲವನೋ ನೀನು?

ಚಾರ—ಅಯ್ಯಾ ಬ್ರಾಹ್ಮಣ, ಕೋಪಿಸಬೇಡ. ಎಲ್ಲರೂ ಎಲ್ಲವನ್ನೂ ಬಲ್ಲವರಲ್ಲ. ನಿಮ್ಮ ಉಪಾಧ್ಯಾಯರಿಗೆ ಗೊತ್ತಿರುವುದು ಕೆಲವುಂಟು; ನಮ್ಮಂಥವರಿಗೆ ಗೊತ್ತಿರುವುದೂ ಕೆಲವುಂಟು.

ಶಾರ್ಙ್ಗರವ—ಮೂರ್ಖ, ನಮ್ಮ ಉಪಾಧ್ಯಾಯರ ಸರ್ವಜ್ಞತೆಯನ್ನು ಹಾರಿಸಬೇಕೆಂದು ಮಾಡಿದ್ದೀಯೋ?

ಚಾರ—ಅಲ್ಲವಯ್ಯಾ, ಹಾಗೆ ನಿಮ್ಮ ಉಪಾಧ್ಯಾಯರಿಗೆ ಸರ್ವವೂ ಗೊತ್ತಿದ್ದರೆ, ಅವರು ತಿಳಿದುಕೊಳ್ಳಲಿ: ಚಂದ್ರನನ್ನು ಕಂಡರೆ ಯಾರಿಗೆ ಆಗುವುದಿಲ್ಲ?

ಶಾರ್ಙ್ಗರವ—ಒಳ್ಳೆಯ ಪ್ರಶ್ನೆ! ಇದನ್ನು ತಿಳಿದದ್ದರಿಂದ ಏನು, ಬಿಟ್ಟದ್ದರಿಂದ ಏನು?

ಚಾರ—ಇದನ್ನು ತಿಳಿದದ್ದರಿಂದ ಏನು ಎನ್ನುವುದು ನಿಮ್ಮ ಉಪಾಧ್ಯಾ

ಯರಿಗೆ ತಿಳಿಯುತ್ತದೆ. ನಿನಗೆ ತಿಳಿಯುವುದು ಇಷ್ಟೇ: ಚಂದ್ರನನ್ನು ಕಂಡರೆ ಕಮಲಗಳಿಗೆ ಆಗುವುದಿಲ್ಲ ಎಂದು ಮಾತ್ರ.

(ಇಷ್ಟರೊಳಗೆ ಚಾಣಕ್ಯನು ಇಬ್ಬರಿಗೂ ಕಾಣದಂತೆ ಒಳಗಿನಿಂದ ಬಂದು ಬಾಗಿಲ ಬಳಿ ಆಲಿಸುತ್ತಾ ನಿಲ್ಲುವನು.)

ಚಾರ—ಇಲ್ಲಿ ನೋಡು—

ನೋಟಕೆ ತಾವರೆ ಬಲುಸೊಗಸು;
ಅದರೊಳಗಡೆ ಬಿರುಸು:
ಮಂಡಲ ತುಂಬಿದ ಚಂದ್ರನಲಿ
ಹಗೆಗೊಳುವುದು ಕನಲಿ.

ಚಾಣಕ್ಯ—(ತನ್ನಲ್ಲಿ) ಏನು? ಚಂದ್ರಗುಪ್ತನಿಗೆ ಆಗದವರನ್ನು ನಾನು ಬಲ್ಲೆ ಎಂದು ಇವನು ಸೂಚಿಸುವ ಹಾಗಿದೆ. ಓಹೋ, ಇವನು ನಮ್ಮ ಗೂಢಚಾರ ನಿಪುಣಕ.

ಶಾರ್ಙ್ಗರವ—ಮೂರ್ಖ, ಇದೇನು, ಅಸಂಬದ್ಧವಾಗಿ ಹರಟುತ್ತಿದ್ದೀಯೆ?

ಚಾರ—ಓ ಬ್ರಾಹ್ಮಣ, ಕೇಳಬಲ್ಲವನು ದೊರೆತರೆ ಇದು ಸುಸಂಬದ್ಧವೇ ಆದೀತು.

ಚಾಣಕ್ಯ—(ಸ್ವಲ್ಪ ಮುಂದೆ ಬಂದು ಗಟ್ಟಿಯಾಗಿ) ಅಯ್ಯಾ, ನಿರಾತಂಕವಾಗಿ ಒಳಗೆ ಬಾ. ಕೇಳಬಲ್ಲವನೂ ತಿಳಿಯಬಲ್ಲವನೂ ದೊರೆಯುತ್ತಾನೆ. (ಶಾರ್ಙ್ಗರವನೂ ಚಾರನೂ ತಿರುಗಿ ನೋಡುವರು. ಚಾಣಕ್ಯನು ವೇದಿಕೆಯ ಮೇಲೆ ಕುಳಿತುಕೊಂಡು, ಚಾರನಿಗೆ) ಬಾರಯ್ಯ, ಇಲ್ಲಿ ಕುಳಿತುಕೊ. ಶಾರ್ಙ್ಗರವ, ಮುಂಬಾಗಿಲ ಬಳಿ ಇರು ಹೋಗು. ಯಾರಾದರೂ ಬಂದರೆ ನನಗೆ ತಿಳಿಸು.

(ಚಾರನು ಕೆಳಗೆ ಕುಳಿತುಕೊಳ್ಳುವನು. ಶಾರ್ಙ್ಗರವನು ಹೊರಟುಹೋಗುವನು.)

ಚಾಣಕ್ಯ—ನಿಪುಣಕ, ನೀನು ಹೋಗಿದ್ದ ಕಾರ್ಯವೇನಾಯಿತು?

ಚಾರ—ಈ ನನ್ನ ವೇಷ, ಪೂಜ್ಯರ ಅನುಗ್ರಹ—ಇದರಿಂದ ಎಲ್ಲೆಲ್ಲಿ ಸುತ್ತುವುದಕ್ಕೂ ಅಡ್ಡಿಯೇ ಇರಲಿಲ್ಲ. ಯಾರ ಮನೆಗಾದರೂ ನಿರಾತಂಕ

ವಾಗಿ ನುಗ್ಗಿ ಬಿಡುತ್ತಿದ್ದೆ. ಜನಗಳ ನಡೆನುಡಿಯನ್ನು ಸುಲಭವಾಗಿ ಶೋಧಿಸುತ್ತಿದ್ದೆ.

ಚಾಣಕ್ಯ—ಸರಿ. ಚಂದ್ರಗುಪ್ತನ ಮೇಲೆ ಪ್ರಜೆಗಳಿಗೆ ಅನುರಾಗ ಹುಟ್ಟಿದೆಯೆ?

ಚಾರ—ಪೂಜ್ಯರು ಅಡ್ಡಿಗಳನ್ನೆಲ್ಲಾ ನಿವಾರಣೆಮಾಡಿರುವುದರಿಂದ ಆಗಲೇ ಚೆನ್ನಾಗಿ ಹುಟ್ಟಿದೆ. ಮಹಾರಾಜರು ಪ್ರಭುಗಳಾಗಿ ಇನ್ನೂ ಕೆಲವು ದಿನಗಳೇ ಆಗಿದ್ದರೂ ಜನರು ಅವರನ್ನು ತುಂಬ ಹೊಗಳುತ್ತಿದ್ದಾರೆ. ಅವರ ಸೌಜನ್ಯ ದಾಕ್ಷಿಣ್ಯಗಳಿಗೆ ಎಲ್ಲರೂ ಬೆರಗಾಗಿದ್ದಾರೆ. ಹಿಂದಿನ ದೊರೆಗಳಿಗೆ ಆಪ್ತರಾಗಿದ್ದವರಲ್ಲಿ ಕೂಡ ಎಷ್ಟೋ ಜನ ಆಗಲೆ ಹೊಸ ಮಹಾರಾಜರ ಕಡೆಗೆ ಒಲೆಯುತ್ತಿದ್ದಾರೆ.

ಚಾಣಕ್ಯ—ಹಾಗಾದರೆ ನಂದರನ್ನು ಕೊಂದು ಚಂದ್ರಗುಪ್ತನು ಈ ಪಟ್ಟಣವನ್ನು ಆಕ್ರಮಿಸಿದ್ದಕ್ಕೆ ಜನಗಳಿಗೆ ಕೋಪವಿಲ್ಲ?

ಚಾರ—ಇಲ್ಲ ಎಂದೇ ಹೇಳಬೇಕು. ಹಿಂದಿನ ರಾಜರು ದುರಹಂಕಾರಿಗಳೆಂದು ಅನೇಕರಿಗೆ ಅವರಲ್ಲಿ ಜುಗುಪ್ಸೆ ಹುಟ್ಟಿತ್ತು. ಅಲ್ಲದೆ ನಮ್ಮ ಮಹಾರಾಜರಿಗೆ ಅವರು ಅನ್ಯಾಯಮಾಡಿದ್ದ ವಿಷಯವೂ ಜನರಿಗೆ ಗೊತ್ತಿದೆ. . . . ಇಷ್ಟಕ್ಕೂ, ಇವರೂ ರಾಜವಂಶಕ್ಕೆ ಸೇರಿದವರೇ ತಾನೆ.

ಚಾಣಕ್ಯ—ಸಂತೋಷ. ಆದರೆ "ಇಲ್ಲ ಎಂದೇ ಹೇಳಬೇಕು" ಎಂದು ನೀನು ಹೇಳಿದೆ. ಯಾರೋ ಕೆಲವರಿಗೆ ಇನ್ನೂ ಅಸಮಾಧಾನವಿರುವ ಹಾಗೆ ಕಾಣಿಸುತ್ತದೆ.

ಚಾರ—ಹೌದು. ಅಮಾತ್ಯ ರಾಕ್ಷಸನಲ್ಲಿ ಮೊದಲಿನಿಂದ ಬಳಕೆ ಮನ್ನಣೆಗಳನ್ನು ಹೊಂದಿದ್ದವರು ಕೆಲವರು ಈ ಪಟ್ಟಣದಲ್ಲೇ ಇದ್ದಾರೆ. ಅವರಿಗೆ ಹಳೆಯ ದೊರೆಗಳ ನಚ್ಚು ಹೋಗಿಲ್ಲ. ಅವರು ಮಾತ್ರ ನಮ್ಮ ಮಹಾರಾಜರ ಅಭ್ಯುದಯವನ್ನು ಸೈರಿಸುವುದಿಲ್ಲ.

ಚಾಣಕ್ಯ—(ಕೋಪದಿಂದ) ತಮ್ಮ ಜೀವಿತವನ್ನೂ ಸೈರಿಸುವುದಿಲ್ಲ ಎನ್ನು ಹಾಗಾದರೆ. ರಾಕ್ಷಸನ ಪ್ರೇರಣೆ ಅವರಿಗೆ ವಿಶೇಷವಾಗಿರಬೇಕು.

ಚಾರ—ಹೌದು. ಆತನು ಊರು ಬಿಟ್ಟು ಹೋಗಿ ಪರದೇಶವನ್ನು ಸೇರಿದ್ದರೂ

ಬಹಳ ಕಾರುಬಾರು ನಡಸುತ್ತಿದ್ದಾನೆ. ಅದೆಲ್ಲ ಸಾಗುವುದು ಇವರ ಮೂಲಕ.

ಚಾಣಕ್ಯ—ಯಾರು ಇವರು? ಹೆಸರುಗಳು ಗೊತ್ತುಂಟೋ?

ಚಾರ—ಹೆಸರು ತಿಳಿದುಕೊಳ್ಳದೆ ಪೂಜ್ಯರಿಗೆ ಅರಿಕೆ ಮಾಡುವುದುಂಟೆ?

ಚಾಣಕ್ಯ—ಹಾಗಾದರೆ ಹೇಳು, ಕೇಳೋಣ.

ಚಾರ—ಪೂಜ್ಯರು ಲಾಲಿಸಬೇಕು. ಮೊದಲನೆಯವನು ಒಬ್ಬ ಕ್ಷಪಣಕ; ಅವನ ಹೆಸರು ಜೀವಸಿದ್ಧಿ. (ಹೆಸರನ್ನು ಕೇಳಿ ಚಾಣಕ್ಯನು ಮುಗುಳುನಗೆ ನಗುವನು.) ಅವನಿಗೆ ಅಮಾತ್ಯ ರಾಕ್ಷಸನಲ್ಲಿ ತುಂಬ ಅಭಿಮಾನ.

ಚಾಣಕ್ಯ—ಕ್ಷಪಣಕ ಜೀವಸಿದ್ಧಿ! ಸರಿ, ಅವನ ದ್ರೋಹವೇನು?

ಚಾರ—ಅಮಾತ್ಯ ರಾಕ್ಷಸನು ನೇಮಿಸಿದ್ದ ವಿಷಕನ್ಯೆಯನ್ನು ಪರ್ವತೇಶ್ವರ ಪ್ರಭುಗಳ ಬಳಿಗೆ ಕರೆದುಕೊಂಡು ಹೋಗಿ ಬಿಟ್ಟವನು ಇವನೇ. ಆಕೆಯನ್ನು ಹೊಂದಿ ಅವರು ತೀರಿಹೋದ ಸಂಗತಿ ಪೂಜ್ಯರಿಗೆ ತಿಳಿದೇ ಇದೆ.

ಚಾಣಕ್ಯ—ನಮ್ಮ ಪ್ರಿಯಮಿತ್ರನನ್ನು ಇವನೋ ಹಾಗಾದರೆ ಕೊಲೆ ಮಾಡಿಸಿದವನು?

ಚಾರ—ಅಷ್ಟಕ್ಕೇ ಮುಗಿದದ್ದು ನಮ್ಮ ಭಾಗ್ಯ. ಸಾಧ್ಯವಾದರೆ ಮಹಾರಾಜರ ಪಾದಕ್ಕೇ ಆಕೆಯನ್ನು ಒಪ್ಪಿಸಬೇಕೆಂದು ಅವನಿಗೆ ರಾಕ್ಷಸನು ನೇಮಿಸಿದ್ದನಂತೆ. ಅವನು ಬೀರಿದ ಕವಣೆಕಲ್ಲು ಹಕ್ಕಿಗೆ ತಗುಲುವ ಬದಲು ಹಣ್ಣಿಗೆ ತಗುಲಿತು.

ಚಾಣಕ್ಯ—ಸರಿ.

ಚಾರ—ಈ ಕ್ಷಪಣಕ ತುಂಬಾ ಬಾಯಿಬಡುಕ. ಮಹಾರಾಜರನ್ನು ಕುರಿತು ಬಾಯಿಗೆ ಬಂದ ಹಾಗೆಲ್ಲಾ ಆಡುತ್ತಿರುತ್ತಾನೆ.

ಚಾಣಕ್ಯ—ಅವನಿಗೆ ತಕ್ಕ ಶಿಕ್ಷೆಯನ್ನು ವಿಧಿಸಬೇಕು. ಮತ್ತೊಬ್ಬನು ಯಾರು?

ಚಾರ—ರಾಯಸದ ಶಕಟದಾಸ—ಅಮಾತ್ಯ ರಾಕ್ಷಸನ ಪ್ರಿಯಮಿತ್ರ.

ಚಾಣಕ್ಯ—ರಾಯಸದವನೆ? ಕಾಗದದ ಮೇಲೆ ಅಕ್ಷರ ಗೀಚಿಕೊಂಡಿರುವವನು ಬಹಳ ಮಾಡಿರಲಾರನು.

ಚಾರ—ಪೂಜ್ಯರು ಕ್ಷಮಿಸಬೇಕು. ಮಹಾರಾಜರನ್ನು ಕಪಟದಿಂದ ಘಾತಿಸು ವುದಕ್ಕೆ ಬಂದಿದ್ದವರನ್ನು ಈತನೇ ನೇಮಿಸಿದ್ದವನು. ಪೂಜ್ಯರ ವಿಚಕ್ಷಣೆಯಿಂದ ಮಹಾರಾಜರು ಪಾರಾದರು.

ಚಾಣಕ್ಯ—ಸರಿ. ಶತ್ರು ಸಾಮಾನ್ಯನಾದರೂ ಉಪೇಕ್ಷಿಸಬಾರದೆಂದು ಅನುಭವಕ್ಕೆ ಬಂದಿತು. ಇನ್ನೂ ಯಾರಾದರೂ ಉಂಟೋ ?

ಚಾರ—ಇನ್ನೊಬ್ಬನಿದ್ದಾನೆ. ಅವನು ಇವರಿಬ್ಬರಂತೆ ತಂತ್ರಿಯಲ್ಲದಿದ್ದರೂ ಪೂಜ್ಯರು ಅವನ ವಿಷಯವನ್ನು ಅಗತ್ಯವಾಗಿ ಪರಾಂಬರಿಸಬೇಕು.

ಚಾಣಕ್ಯ—ಯಾರು ಅವನು ? ರಾಕ್ಷಸನ ಮಿತ್ರನೇ ತಾನೆ ?

ಚಾರ—ಮಿತ್ರ ಎಂದರೆ ಸಾಲದು ; ಅಮಾತ್ಯ ರಾಕ್ಷಸನ ಎರಡನೆಯ ಹೃದಯ ಎನ್ನಬೇಕು. ಅವನ ಹೆಸರು ಚಂದನದಾಸ ; ಅವನು ಈ ಊರಿನ ಪ್ರಸಿದ್ಧ ರತ್ನಪಡಿ ವರ್ತಕ. ಅಮಾತ್ಯನು ಈ ನಗರದಿಂದ ತಪ್ಪಿಸಿ ಕೊಂಡು ಹೋಗುವಾಗ ಇವನ ಮನೆಯಲ್ಲಿ ತನ್ನ ಕುಟುಂಬವನ್ನು ಬಿಟ್ಟು ಹೋಗಿದ್ದಾನೆ.

ಚಾಣಕ್ಯ—(ಹಿಗ್ಗಿ) ಅಮಾತ್ಯನ ಕುಟುಂಬ ! ಇವನು ಅಮಾತ್ಯನ ಪರಮ ಮಿತ್ರನೇ ಆಗಿರಬೇಕು : ತನಗೆ ಅನುರೂಪರಲ್ಲದವರ ಬಳಿ ರಾಕ್ಷಸನು ತನ್ನ ಕುಟುಂಬವನ್ನು ಬಿಟ್ಟಿರಲಾರನು. (ಯೋಚಿಸುವನು.) ಸರಿ ! . . . ಚಂದನದಾಸನ ಮನೆಯಲ್ಲಿ ರಾಕ್ಷಸನ ಕುಟುಂಬವಿರುವುದು ಹೇಗೆ ಗೊತ್ತಾಯಿತು ?

ಚಾರ—ಈ ಮುದ್ರೆಯುಂಗುರದಿಂದ. (ಒಂದು ಮುದ್ರಿಕೆಯನ್ನು ಚಾಣಕ್ಯನಿಗೆ ಒಪ್ಪಿಸುವನು.)

ಚಾಣಕ್ಯ—(ಕೈಗೆ ತೆಗೆದುಕೊಂಡು ತಿರುಗಿಸಿ ನೋಡಿ ಅಕ್ಷರವನ್ನು ಓದುತ್ತಾ) "ರಾಕ್ಷಸ" ! (ಹರ್ಷದಿಂದ) ರಾಕ್ಷಸನೇ ನಮ್ಮ ಕೈಗೆ ಬಯಸಿ ಬಿದ್ದ ಹಾಗಾಯಿತು. (ಚಾರನ ಕಡೆಗೆ ತಿರುಗಿ) ಇದು ನಿನಗೆ ಸಿಕ್ಕಿದ ಬಗೆ ಹೇಗೆ ? ವಿಸ್ತಾರವಾಗಿ ಹೇಳು.

ಚಾರ—ಲಾಲಿಸಬೇಕು. ಎಂದಿನಂತೆ ಈ ಚಿತ್ರಪಟಗಳನ್ನು ಹಿಡಿದುಕೊಂಡು ನೋಡುವವರಿಗೆ ಶಂಕೆ ತಟ್ಟದಂತೆ ಅಲ್ಲಿ ಇಲ್ಲಿ ಸುತ್ತುತ್ತಾ ಚಂದನ

ದಾಸಸೆಟ್ಟಿಯ ಮನೆಯನ್ನು ಹೊಕ್ಕೆನು. ಅಲ್ಲಿ ಇವನ್ನು ಹರಡಿಕೊಂಡು ಹಾಡು ಹೇಳುವುದಕ್ಕೆ ಮೊದಲುಮಾಡಿದೆನು.

ಚಾಣಕ್ಯ—ಸರಿ.

ಚಾರ—ಆಗ ಸುಮಾರು ಐದು ವರ್ಷದ ಒಂದು ಮುದ್ದಾದ ಗಂಡುಮಗು ಮಕ್ಕಳಿಗೆ ಸಹಜವಾದ ಕುತೂಹಲದಿಂದ ಕಣ್ಣನ್ನು ಅರಳಿಸಿಕೊಂಡು ಒಳಗಿನ ಒಂದು ಕೋಣೆಯಿಂದ ಹೊರಗೆ ಬರುವುದರಲ್ಲಿತ್ತು. ಅಷ್ಟರಲ್ಲೇ "ಅಯ್ಯೋ, ಮಗು ಹೊರಟುಹೋದ!" ಎಂದು ಯಾರೋ ಹೆಂಗಸರು ಅದೇ ಕೋಣೆಯೊಳಗೆ ಭಯದಿಂದ ಕೂಗಿಕೊಂಡ ಶಬ್ದವಾಯಿತು. ಆಗ ಒಬ್ಬ ಹೆಂಗಸು ಬಾಗಿಲಿನಲ್ಲಿ ಸ್ವಲ್ಪ ಇಣಿಕಿ ನೋಡಿ, ಹೊರಗೆ ಬರುತ್ತಿದ್ದ ಮಗುವನ್ನು ಗದರಿಸುತ್ತಾ ತನ್ನ ಕೋಮಲವಾದ ಕೈಯಲ್ಲಿ ಹಿಡಿದು ಒಳಕ್ಕೆ ಎಳೆದುಕೊಂಡಳು. ಮಗುವನ್ನು ಎಳೆದಾಡುವ ಗಲಭೆಯಲ್ಲಿ ಆಕೆಯ ಬೆರಳಿನಿಂದ ಈ ಮುದ್ರಿಕೆ ಜಾರಿ ಹೊಸಿಲಿನ ಮೇಲೆ ಬಿತ್ತು; ಅಲ್ಲಿಂದ ಹಾಗೆಯೇ ಚಿಮ್ಮಿ ನನ್ನ ಹೆಜ್ಜೆಯ ಬಳಿ ಬಂದು ನಿಂತಿತು. ಸಂಭ್ರಮದಲ್ಲಿ ಆಕೆಗೆ ಇದೊಂದೂ ಗೊತ್ತಾಗಲೇ ಇಲ್ಲ. ಬಳಿಕ ಉಂಗುರವನ್ನು ಎತ್ತಿಕೊಂಡು ನೋಡಿದರೆ, ಅದರ ಮೇಲೆ ಅಮಾತ್ಯ ರಾಕ್ಷಸನ ಹೆಸರು ಕೆತ್ತಿತ್ತು. ಆದ್ದರಿಂದ ಪೂಜ್ಯರ ಪಾದಕ್ಕೆ ಒಪ್ಪಿಸೋಣವೆಂದು ತಂದೆ.

ಚಾಣಕ್ಯ—(ಉಂಗುರವನ್ನು ತಿರುಗಿಸಿ ನೋಡಿ) ಗಂಡಸಿನ ಬೆರಳಿಗೆ ಸರಿಹೋಗುವ ಉಂಗುರ. ಆದಕಾರಣವೇ ಆಕೆಯ ಬೆರಳಿನಿಂದ ಬೇಗ ಕಳಚಿಕೊಂಡಿರಬೇಕು. . . .

(ಶಾರ್ಙ್ಗರವನು ಪ್ರವೇಶಿಸುವನು.)

ಶಾರ್ಙ್ಗರವ—ಉಪಾಧ್ಯಾಯರೆ, ತಮ್ಮ ಸಮಯವನ್ನು ತಿಳಿಯುವುದಕ್ಕೆ ಮಹಾರಾಜರ ಪ್ರತೀಹಾರಿ ಬಂದಿದ್ದಾಳೆ.

ಚಾಣಕ್ಯ—ನಾನೂ ಚಂದ್ರಗುಪ್ತನನ್ನು ನೋಡಬೇಕಾಗಿದೆ.

ಶಾರ್ಙ್ಗರವ—ಮಹಾರಾಜರು ಆಗಲೇ ಹೊರಟುಬರುತ್ತಿದ್ದಾರಂತೆ. ಈ ವೇಳೆಗೆ ಆಶ್ರಮವನ್ನು ಸಮೀಪಿಸಿರಬಹುದು.

ಚಾಣಕ್ಯ—ಬಂದ ಕೂಡಲೆ ಇಲ್ಲಿಗೆ ಕಳುಹಿಸು.

(ಶಾರ್ಙ್ಗರವನು ಹೋಗುವನು.)

ಚಾಣಕ್ಯ—ನಿಪುಣಕ, ನೀನು ಈ ದಿನ ಅಮೂಲ್ಯವಾದ ಕಾರ್ಯಸಾಧನೆ ಮಾಡಿದ್ದೀಯೆ. ನಿನ್ನ ಶ್ರಮಕ್ಕೆ ತಕ್ಕ ಪ್ರಯೋಜನವನ್ನು ಇಷ್ಟರಲ್ಲೇ ಹೊಂದುವೆ. ಎಂದಿನಂತೆ ಜಾಗರೂಕನಾಗಿರು.

ಚಾರ—ಪೂಜ್ಯರ ಪ್ರಸಾದ. (ಹೋಗುವನು.)

ಚಾಣಕ್ಯ—(ಎರಡು ನಿಮಿಷ ಚಿಂತಿಸಿ) ಇನ್ನು ಕಾರ್ಯಕ್ಕೆ ಪ್ರಾರಂಭಿಸಬೇಕು. ಶಾರ್ಙ್ಗರವ, ಶಾರ್ಙ್ಗರವ!

(ಶಾರ್ಙ್ಗರವನು ಬರುವನು.)

ಚಾಣಕ್ಯ—ಪತ್ರವನ್ನೂ ಮಸಿಯ ಕುಡಿಕೆಯನ್ನೂ ತೆಗೆದುಕೊಂಡು ಬಾ. (ಶಾರ್ಙ್ಗರವನು ಆ ರೀತಿ ಮಾಡುವನು.) ಶಾರ್ಙ್ಗರವ, ನಾನು ಸಿದ್ಧಾರ್ಥಕನನ್ನು ನೋಡಬೇಕಾಗಿದೆ. ಆದಷ್ಟು ಬೇಗ ಕರೆದು ಕೊಂಡು ಬಾ.

ಶಾರ್ಙ್ಗರವ—ಅಪ್ಪಣೆ. (ಹೋಗುವನು.)

(ಚಾಣಕ್ಯನು ಒಂದು ಲೇಖವನ್ನು ಬರೆಯುತ್ತಿರುವನು. ಅದು ಮುಗಿಯುವ ವೇಳೆಗೆ ಚಂದ್ರಗುಪ್ತನು ಪ್ರತೀಹಾರಿಯೊಂದಿಗೆ ಪ್ರವೇಶಿಸುವನು.)

ಚಂದ್ರಗುಪ್ತ—ಆರ್ಯ, ಚಂದ್ರಗುಪ್ತನು ಅಭಿವಂದಿಸುತ್ತಾನೆ. (ನಮಸ್ಕರಿಸುವನು.)

ಚಾಣಕ್ಯ—(ಕೈ ಹಿಡಿದು ಎಬ್ಬಿಸಿ) ವಿಜಯಿಭಾವ. ಏಳು, ವತ್ಸ. ಇಲ್ಲಿ ಕುಳಿತುಕೊ. (ಪೀಠವನ್ನು ತೋರಿಸುವನು.)

ಚಂದ್ರಗುಪ್ತ—(ಕುಳಿತು, ಪ್ರತೀಹಾರಿಗೆ) ಶೋಣೋತ್ತರೆ, ಇಲ್ಲಿಗೆ ಯಾರೂ ಬಾರದಂತೆ ನಿನ್ನ ಕೆಲಸವನ್ನು ನೋಡಿಕೊಳ್ಳುತ್ತಿರು.

ಪ್ರತೀಹಾರಿ—ಅಪ್ಪಣೆ. (ಹೋಗುವಳು.)

ಚಾಣಕ್ಯ—(ನಸುನಗುತ್ತಾ) ವತ್ಸ, ಇದೇನು ಇಷ್ಟು ದೂರ ನನ್ನ ಕುಟೀರಕ್ಕೆ ಬಂದದ್ದು? ಮಹಾರಾಜನಾದವನು ಅಧಿಕಾರಿಗಳನ್ನು ತನ್ನ ಬಳಿಗೆ ಕರಸಿಕೊಳ್ಳಬೇಕೇ ಹೊರತು ತಾನೇ ಹುಡುಕಿಕೊಂಡು ಬರಬಾರದು.

ಚಂದ್ರಗುಪ್ತ—ಆರ್ಯರೆ, ಈ ಶಿಷ್ಯನ ಕೈಹಿಡಿದು ತಾವು ಅನುಗ್ರಹಿಸಿದ್ದರಿಂದ ತಾನೆ ನನಗೆ ಈ ಮಹಾರಾಜ ಪದವಿ? ಇಲ್ಲದಿದ್ದರೆ ನನ್ನ ಜ್ಞಾತಿಗಳ ಹಂಗಿನ ಕೂಳನ್ನೇ ತಿಂದುಕೊಂಡು ತೃಣಸಮಾನವಾಗಿ ಬಾಳಬೇಕಾಗಿತ್ತು. ಅವರು ಕೊಟ್ಟ ತೊಂದರೆಯನ್ನೆಲ್ಲಾ, ಅವರು ಮಾಡಿದ ದ್ರೋಹವನ್ನೆಲ್ಲಾ ಮೂಗು ಮುಚ್ಚಿಕೊಂಡು ಅನುಭವಿಸಬೇಕಾಗಿತ್ತು. ತಾವು ನನ್ನ ಸಚಿವರಲ್ಲ, ನನ್ನ ಕುಲದೈವ. ತಮ್ಮನ್ನು ಹುಡುಕಿಕೊಂಡು ಬಾರದೆ ಮತ್ತೆಲ್ಲಿಗೆ ಹೋಗಲಿ? ಆದರೆ . . . ನನಗೂ ಈ ಕುಟೀರಕ್ಕೆ ಹುಡುಕಿಕೊಂಡು ಬರುವುದು ಸಮ್ಮತವಲ್ಲ. (ಸುತ್ತಲೂ ತೋರಿಸುತ್ತಾ) ಇಲ್ಲಿ ಪರಾಂಬರಿಸಬೇಕು. ಈ ಹಳೆಯ ಗೋಡೆ ಆಗಲೇ ಬಿರುಕುಬಿಟ್ಟು ಕುಸಿಯುತ್ತಿದೆ. ಸಮಿತ್ತನ್ನು ಹೇರಿ ಹೇರಿ ಈ ಚಾವಣಿ ನೆಲಕ್ಕೆ ಬಗ್ಗಿ ಹೋಗಿದೆ. ಇಲ್ಲಿ ದರ್ಭೆಯ ಹೊರೆ; ಅಲ್ಲಿ ಬೆರಣಿಯ ರಾಶಿ. ರಾಜಸಚಿವನ ಭವನವೆ ಇದು! ದೀನರಿಗೂ ಯೋಗ್ಯವಲ್ಲದ ಗುಡಿಸಿಲಿನಲ್ಲಿ ತಾವು ವಾಸಮಾಡುತ್ತಿದ್ದರೆ ನಾನು ಸಹಿಸುವುದು ಹೇಗೆ? ತಾವು ನಿಃಸ್ಪೃಹರು; ವೈಭವದಲ್ಲಿ ತಮಗೆ ಜುಗುಪ್ಸೆ. ಆದರೆ ಇದು ನನಗೆ ಅವಮಾನವಲ್ಲವೆ? ಇನ್ನು ಮುಂದೆ ನನ್ನ ಪ್ರವೇಶಕ್ಕೆ ಯೋಗ್ಯವಾದ ಮಂದಿರದಲ್ಲಿ ತಾವು ವಾಸ ಮಾಡಬೇಕು.

ಚಾಣಕ್ಯ—(ನಗುತ್ತಾ) ನಿನ್ನ ಮಹಾರಾಜ ಪದವಿ ಮೊದಲು ಸ್ಥಿರವಾಗಲಿ. ಆ ಬಳಿಕ ನಿನ್ನ ಸಚಿವನಿಗೆ ಅರಮನೆಯನ್ನೇ ಬಿಟ್ಟುಕೊಡುವೆಯಂತೆ. ರಾಜ್ಯವನ್ನು ಗೆಲ್ಲುವುದು ದೊಡ್ಡದಲ್ಲ; ಗೆದ್ದ ರಾಜ್ಯವನ್ನು ಉಳಿಸಿ ಬೆಳಸಿಕೊಳ್ಳುವುದು ದೊಡ್ಡದು. ಅಲ್ಲಿಯವರೆಗೆ ನನ್ನ ಪಾಡಿಗೆ ನನ್ನನ್ನು ಬಿಡು. ಇದರ ಮೇಲೆ, ನನಗೆ ಈ ಕುಟೀರವೇ ಸಾಕು. . . . ಅದಿರಲಿ, ನೀನು ಏಕೆ ಬಂದೆಯೆಂದು ಹೇಳಲಿಲ್ಲ.

ಚಂದ್ರಗುಪ್ತ—ಪರ್ವತೇಶ್ವರನ ಉತ್ತರಕ್ರಿಯೆಗಳೆಲ್ಲ ನಿನ್ನೆಗೆ ಮುಗಿದುವು. ಅವನ ಮಗ ಹೇಳದೆ ಕೇಳದೆ ಇಲ್ಲಿಂದ ಓಡಿಹೋದದ್ದರಿಂದ ಪರ್ವತೇಶ್ವರನು ಧರಿಸಿದ್ದ ಆಭರಣಗಳೆಲ್ಲವೂ ದಿಕ್ಕಿಲ್ಲದೆ ನಮ್ಮ

ಬಳಿಯೇ ಉಳಿದಿವೆ. ಅವುಗಳನ್ನು ಕಟ್ಟಿಸಿ ಬೊಕ್ಕಸದಲ್ಲಿಡಿಸಿದ್ದೇನೆ. ಇನ್ನು ಅವುಗಳ ವಿನಿಯೋಗ ಹೇಗೆ ಎಂದು ತಮ್ಮ ಅಪ್ಪಣೆಯಾಗಬೇಕು.

ಚಾಣಕ್ಯ—ಇಂಥ ಸಣ್ಣ ವಿಷಯಗಳನ್ನು ಇನ್ನು ಮುಂದೆ ನೀನೇ ನೋಡಿಕೊ. ಮುಖ್ಯವಾದವಕ್ಕೆ ಮಾತ್ರ ನನ್ನನ್ನು ಕುರಿತರೆ ಸಾಕು. ಅದಿರಲಿ, ನಿನ್ನ ಅಭಿಮತ ಹೇಗೆ ?

ಚಂದ್ರಗುಪ್ತ—ಅವುಗಳನ್ನು ಸದ್ಬ್ರಾಹ್ಮಣರಿಗೆ ದಾನಕೊಟ್ಟುಬಿಡಬೇಕೆಂದು ಕುತೂಹಲವಿದೆ. ನಮ್ಮ ಉಪಯೋಗಕ್ಕೆ ಇಟ್ಟುಕೊಳ್ಳಲು ನನಗೆ ಸ್ವಲ್ಪವೂ ಇಷ್ಟವಿಲ್ಲ.

ಚಾಣಕ್ಯ—ಒಪ್ಪಿದೆ. ನನ್ನ ಅಭಿಮತವೂ ಹಾಗೆಯೇ. ಯೋಗ್ಯರಾದ ಬ್ರಾಹ್ಮಣರನ್ನು ನಾನು ನೋಡಿ ಕಳುಹಿಸಿಕೊಡುತ್ತೇನೆ. ಅವರಿಗೆ ದಾನ ಕೊಟ್ಟರೆ ಮುಂದೆ ಮಹಾಫಲ ನಿನಗೆ ಲಭಿಸುತ್ತದೆ. (ಚಂದ್ರಗುಪ್ತನು ಸುಮ್ಮನಿರುವುದನ್ನು ನೋಡಿ) ಮತ್ತೇನು ? . . . (ದಿಟ್ಟಿಸಿ ನೋಡಿ, ಧೈರ್ಯಕೊಡುತ್ತ) ನಿನ್ನ ಮನಸ್ಸಿನಲ್ಲಿ ಏನೋ ಒತ್ತುತ್ತಿದೆ. ಸಂಕೋಚವಿಲ್ಲದೆ ಬಿಚ್ಚಿ ಹೇಳು.

ಚಂದ್ರಗುಪ್ತ—(ಗಟ್ಟಿಮನಸ್ಸು ಮಾಡಿ) ಆರ್ಯರಿಗೆ ಅಸಮಾಧಾನವುಂಟಾಗದಿದ್ದರೆ ಒಂದು ಮಾತನ್ನು ಹೇಳುತ್ತೇನೆ. ಪರ್ವತೇಶ್ವರನ ಮರಣ ನನ್ನನ್ನು ಬಹಳವಾಗಿ ಬಾಧಿಸುತ್ತಿದೆ. ಮಿತ್ರನನ್ನು ಕೊಲ್ಲಿಸಿದ ಹಾಗಾಯಿತಲ್ಲಾ ಎಂದು ಚಿಂತೆ ಹತ್ತಿ ನನಗೆ ನಿದ್ದೆ ಕೂಡ ಸರಿಯಾಗಿ ಬರುವುದಿಲ್ಲ.

ಚಾಣಕ್ಯ—ಚಂದ್ರಗುಪ್ತ, ರಾಜತಂತ್ರದಲ್ಲಿ ನೀನಿನ್ನೂ ನುರಿಯಬೇಕು. ನಡೆದುಹೋದ ಸಂಗತಿಗಳನ್ನು ಕುರಿತು ಹೀಗೆ ಎದೆಗೆಡುತ್ತಾ ಹೋದರೆ ತಪೋವನವೊಂದೇ ನಿನಗೆ ಗತಿ. . . . ಪರ್ವತೇಶ್ವರನನ್ನು ಕೊಲ್ಲಿಸಿದ್ದು ಅನ್ಯಾಯವೆಂದು ನಿನಗೆ ತೋರುತ್ತದೆಯೆ ?

ಚಂದ್ರಗುಪ್ತ—ಅನ್ಯಾಯವಲ್ಲವೆ ಅದು ? ನಂದರ ಸಂಹಾರದಲ್ಲಿ ನಮಗೆ ಬಲಭುಜವಾಗಿ ನಿಂತು ಸಹಾಯಮಾಡಿದವನನ್ನು ನಮ್ಮ ಕೆಲಸ

ತೀರಿದ ಬಳಿಕ ಕಪಟದಿಂದ ತೀರಿಸಿಬಿಟ್ಟರೆ ಅದು ಧರ್ಮವಾದೀತೆ? ಮಾತುಕೊಟ್ಟಿದ್ದಂತೆ ಅವನಿಗೆ ಅರ್ಧರಾಜ್ಯವನ್ನು ಸಲ್ಲಿಸಿದ್ದರೂ ನನಗೆ ವ್ಯಥೆಯುಂಟಾಗುತ್ತಿರಲಿಲ್ಲ. ಈ ಹಾಳು ರಾಜ್ಯಕ್ಕೋಸ್ಕರ ಜ್ಞಾತಿವಧೆಯಾಯಿತು; ಮಿತ್ರದ್ರೋಹವಾಯಿತು! . . ಇನ್ನೂ ಏನು ಆಗಬೇಕಾಗಿದೆಯೋ?

ಚಾಣಕ್ಯ—ಕಣ್ಣುತೆರೆಯುವುದಕ್ಕೆ ಮೊದಲೇ ಇಷ್ಟು ಜುಗುಪ್ಸೆಯೇ! . . . ಚಂದ್ರಗುಪ್ತ, ಎಲ್ಲಿಯ ಮಿತ್ರದ್ರೋಹ? ಮಿತ್ರದ್ರೋಹ ನಿನ್ನದಲ್ಲ; ಅವನದು. ಅವನ ಮರಣ ಅದಕ್ಕೆ ನ್ಯಾಯವಾದ ಶಿಕ್ಷೆ.

ಚಂದ್ರಗುಪ್ತ—ಆರ್ಯರು ನನ್ನ ಅಪಚಾರವನ್ನು ಕ್ಷಮಿಸಬೇಕು. ಇದುವರೆಗೂ ನಾನು ಬೇರೆಯ ರೀತಿ ಭಾವಿಸಿದ್ದೆ.

ಚಾಣಕ್ಯ—ಅಪಚಾರದ ಮಾತು ಇರಲಿ. ಸದ್ಯಕ್ಕೆ ನಿನ್ನ ಔದಾಸೀನ್ಯ ಬಿಟ್ಟುಹೋಯಿತಲ್ಲ! ಇದುವರೆಗೂ ನಾನು ಮಾಡಿದ್ದಕ್ಕೆಲ್ಲಾ "ಅಸ್ತು" ಎಂದುಕೊಂಡು ಬರುತ್ತಿದ್ದವನು, ಈ ದಿನ ಮಾತ್ರ ನಿಜವಾಗಿ ಮಹಾರಾಜನಾದೆ. ನನ್ನ ಮನಸ್ಸಿನ ಆತಂಕ ಅರ್ಧ ಕಳೆಯಿತು. . . . ಕೇಳು. ಅಮಾತ್ಯ ರಾಕ್ಷಸನು ಹೂಡಿದ್ದ ತಂತ್ರ ನಿನಗೆ ಪೂರ್ಣವಾಗಿ ತಿಳಿದಿಲ್ಲ. ನಂದವಂಶವು ನಿರ್ಮೂಲವಾದರೂ ಅವನ ಸ್ವಾಮಿಭಕ್ತಿ ಸ್ವಲ್ಪವೂ ಚಲಿಸಿಲ್ಲ. ಏನಾದರೂ ಮಾಡಿ ನಿನ್ನನ್ನು ಕೊಲ್ಲಿಸಿ ನಂದವಧೆಯ ಸೇಡನ್ನು ತೀರಿಸಿಕೊಳ್ಳಬೇಕೆಂದು ಅವನ ಆಲೋಚನೆ.

ಚಂದ್ರಗುಪ್ತ—ಅವನ ತಂತ್ರಗಳಿಗೆಲ್ಲಾ ತಾವು ಪ್ರತೀಕಾರಮಾಡುತ್ತಲೇ ಇದ್ದೀರಿ. ನನ್ನ ಪ್ರಾಣವನ್ನು ಘಳಿಗೆಘಳಿಗೆಗೂ ರಕ್ಷಿಸುತ್ತಿದ್ದೀರಿ.

ಚಾಣಕ್ಯ—ಅವನ ತಂತ್ರ ಬಹುಮುಖವಾದದ್ದು. ನಂದರು ಹತರಾಗುವುದೇ ತಡ; ಆಗಲೇ ಪರ್ವತೇಶ್ವರನನ್ನು ವಶಪಡಿಸಿಕೊಳ್ಳುವುದಕ್ಕೆ ಹವಣಿಸಿದ್ದನು.

ಚಂದ್ರಗುಪ್ತ—ಆದಮಾತ್ರಕ್ಕೆ ಪರ್ವತೇಶ್ವರನು ಅವನ ಬಲೆಗೆ ಬೀಳುತ್ತಿದ್ದನೆ?

ಚಾಣಕ್ಯ—ಇನ್ನು ಎರಡು ದಿನ ನಾವು ತಡೆದಿದ್ದರೆ ನಿನ್ನ ಅನುಭವಕ್ಕೇ

ಒರುತ್ತಿತ್ತು. ಆ ಮ್ಲೇಚ್ಛರಾಜರನ್ನು ನಂಬಬಹುದೆ? ಪರ್ವತಕನಂತೂ ಕೇವಲ ವಿಶ್ವಾಸದ್ರೋಹಿ. ನೋಡು. ಮೊದಲು ರಾಕ್ಷಸನಿಗೂ ಅವನಿಗೂ ಸ್ನೇಹವಿತ್ತು. ಆದರೂ ನಾವು ಗತ್ಯಂತರವಿಲ್ಲದೆ ಅವನ ಸಹಾಯವನ್ನು ಕೋರಿದಾಗ, ಅರ್ಧರಾಜ್ಯಕ್ಕೆ ಆಸೆಪಟ್ಟು ನಮ್ಮ ಪಕ್ಷವನ್ನು ವಹಿಸಿದನು. ಈಗ ನಂದರು ತೀರಿಹೋದ ಬಳಿಕ ರಾಕ್ಷಸನ ಬೇಳುವೆಯ ಮಾತಿಗೆ ಕಿವಿಸೋತು, ನಂದರ ಪೂರ್ಣ ಸಾಮ್ರಾಜ್ಯವೂ ತನಗೆ ದಕ್ಕುವುದೆಂಬ ಆಸೆಯಿಂದ ನಿನ್ನನ್ನು ರಾಕ್ಷಸನಿಗೆ ಒಪ್ಪಿಸಿಕೊಡುವುದರಲ್ಲಿದ್ದನು.

ಚಂದ್ರಗುಪ್ತ—ಅಷ್ಟು ಬೇಗ ರಾಕ್ಷಸನ ಕಡೆಗೆ ಪರ್ವತೇಶ್ವರನು ಒಲೆಯು ವುದಕ್ಕೆ ಬೇರೆ ಯಾರ ಪ್ರೋತ್ಸಾಹವೂ ಬೇಡವೆ? ಸಾಮಂತ ರಾಜರು ಸಮ್ಮತಿಸಬೇಡವೆ?

ಚಾಣಕ್ಯ—ಚಂದ್ರಗುಪ್ತ, ಕಲಿಪುರುಷನ ಪ್ರೋತ್ಸಾಹವೊಂದೇ ಸಾಕು, ಇದಕ್ಕೆಲ್ಲ. . . . . . ಈ ಗೂಢತಂತ್ರಕ್ಕೆ ಪರ್ವತಕನ ಐವರು ಸಾಮಂತರು ಸೇರಿದ್ದರು. ಅವರು ಯಾರೆಂದು ನಿನಗೆ ಗೊತ್ತೇ ಇದೆ.

ಚಂದ್ರಗುಪ್ತ—ಚಿತ್ರವರ್ಮ, ಮೇಘನಾದ ಮೊದಲಾದವರು ತಾನೆ? ಪರ್ವತೇಶ್ವರನು ನಮಗೆ ಸಹಾಯಮಾಡಿದ್ದೇ ಅವರಿಗೆ ಅಷ್ಟು ಒಪ್ಪಿತವಲ್ಲ.

ಚಾಣಕ್ಯ—ಅಷ್ಟುಮಾತ್ರವೇ ಆದರೆ ಚಿಂತೆಯಿಲ್ಲ. ಆದರೆ ಆ ದ್ರೋಹಿಗಳು ನಮ್ಮ ಕಡೆ ಸೇರಿದ ಮೇಲೂ ಉದ್ದಕ್ಕೂ ರಾಕ್ಷಸನ ಸಂಗಡ ಸಂಚು ನಡಸುತ್ತಿದ್ದರು. ಪರ್ವತಕನ ಕಿವಿ ಮುರಿದವರೂ ಇವರೇ. ಇರಲಿ; ತಮ್ಮ ದ್ರೋಹದ ಪ್ರಪಾತಕ್ಕೆ ತಾವೇ ಬೀಳುತ್ತಾರೆ. ಈಗಲಾದರೂ ಹೇಳು: ಯಾರು ಮಿತ್ರದ್ರೋಹಿಗಳು?

ಚಂದ್ರಗುಪ್ತ—(ಸುಮ್ಮನಿರುವನು.)

ಚಾಣಕ್ಯ—ನಾವು ಆತ್ಮರಕ್ಷಣೆ ಮಾಡಿಕೊಂಡದ್ದೂ ಮಿತ್ರದ್ರೋಹವೆ? ರಾಜತಂತ್ರದಲ್ಲಿ ಬೆಣ್ಣೆಮನಸ್ಸು ಸಲ್ಲದು, ವತ್ಸ. ಇಷ್ಟಕ್ಕೂ ನಾವು ಮಾಡಿದ್ದು ತಾನೆ ಏನು? ನಿನ್ನ ಕೊಲೆಗಾಗಿ ರಾಕ್ಷಸನು ನೇಮಿಸಿದ

ವಿಷಕನ್ಯೆಯನ್ನು ನಾವು ಪರ್ವತಕನ ಒಳಿಗೆ ಸೇರಿಸಿದೆವು. ಆ ಕಾಮುಕನಿಗೆ ವಿವೇಚನೆ ಇಲ್ಲದಿದ್ದರೆ ನಾವೇನು ಮಾಡಬಹುದು?

ಚಂದ್ರಗುಪ್ತ—ಆದರೂ ಜನಗಳಲ್ಲಿ ನಮಗೆ ನಿಂದೆ ತಪ್ಪಲಿಲ್ಲ. ಅರ್ಧರಾಜ್ಯವನ್ನು ಕೊಡಲಾರದೆ ಚಾಣಕ್ಯ ಚಂದ್ರಗುಪ್ತರು ಪರ್ವತೇಶ್ವರನನ್ನು ಕೊಲೆಮಾಡಿಸಿದರೆಂದು ಅವರು ಆಡಿಕೊಳ್ಳದೆ ಬಿಡುತ್ತಾರೆಯೆ?

ಚಾಣಕ್ಯ—ನೋಡು ಹಾಗಾದರೆ. ಆ ದೂರನ್ನು ರಾಕ್ಷಸನ ತಲೆಗೇ ಕಟ್ಟುತ್ತೇನೆ.

ಚಂದ್ರಗುಪ್ತ—ಹೇಗೆ ಎಂದು ಕೇಳಬಹುದೆ?

ಚಾಣಕ್ಯ—ವಿಷಕನ್ಯೆಯನ್ನು ಅರ್ಪಿಸುವುದಕ್ಕೆ ಹೋಗಿದ್ದ ಜೀವಸಿದ್ಧಿಯಿರುವಾಗ ಅದೇನು ಕಷ್ಟ?

ಚಂದ್ರಗುಪ್ತ—ಕ್ಷಪಣಕ ಜೀವಸಿದ್ಧಿ! ಈ ಭಿಕ್ಷು ಇಂದಿಗೂ ನನ್ನ ಮೇಲೆ ವಿಷ ಕಾರುತ್ತಿದ್ದಾನಂತೆ. ಅವನು ನಿಮ್ಮ ಭೇದಕ್ಕೆ ಹೇಗೆ ಒಳಗಾದನೋ ಕಾಣೆ.

ಚಾಣಕ್ಯ—(ನಕ್ಕು) ರಾಕ್ಷಸನು ನಮ್ಮ ಭೇದಕ್ಕೆ ಹೇಗೆ ಒಳಗಾದನೋ ಎಂದು ಕೇಳು. ಜೀವಸಿದ್ಧಿ ಯಾರು ಗೊತ್ತೆ? ನನ್ನ ಸಹಾಧ್ಯಾಯಿ ಇಂದುಶರ್ಮ. ಅವನು ಕ್ಷಪಣಕನ ವೇಷ ಹಾಕಿಕೊಂಡು ಮೊದಲಿನಿಂದಲೂ ರಾಕ್ಷಸನ ಹೃದಯವನ್ನು ಹಿಡಿಯದಿದ್ದರೆ ನಮಗೆ ನಂದನಿಗ್ರಹವೂ ಕಷ್ಟವಾಗುತ್ತಿತ್ತು.

ಚಂದ್ರಗುಪ್ತ—ಈ ಎಲ್ಲಾ ತೊಡಕಿಗಿಂತಲೂ, ರಾಕ್ಷಸನೇ ಯುದ್ಧದಲ್ಲಿ ತೀರಿಹೋಗಿದ್ದರೆ ಚೆನ್ನಾಗಿತ್ತು. ಅದು ನಡೆಯಲಿಲ್ಲ. ತಾವಾದರೂ ಅವನನ್ನು ಹಿಡಿಸಿ ಶೂಲಕ್ಕೇರಿಸಿದ್ದರೆ ನಾವು ನಿಶ್ಚಿಂತರಾಗಿ ಇರಬಹುದಾಗಿತ್ತು.

ಚಾಣಕ್ಯ—ಹಾಗಲ್ಲ. ರಾಕ್ಷಸನಿಗೆ ನಾನು ಬೇರೊಂದು ಉಗ್ರಶಿಕ್ಷೆಯನ್ನು ಗೊತ್ತುಮಾಡಿದ್ದೇನೆ.

ಚಂದ್ರಗುಪ್ತ—ಯಾವುದು ಅದು?

ಚಾಣಕ್ಯ—(ನಗುತ್ತ) ನಿನ್ನ ಸಚಿವನಾಗುವ ಶಿಕ್ಷೆ—ನೀನು ಕಟ್ಟಿಸಿಕೊಡುವ ದಿವ್ಯಭವನದಲ್ಲಿ ವಾಸಮಾಡುವ ಶಿಕ್ಷೆ! . . .

ಚಂದ್ರಗುಪ್ತ—(ಬೆಚ್ಚಿ) ಶಾಂತಂ ಪಾಪಂ! . . . . ಆರ್ಯರು ಇಂಥ ಮಾತನ್ನು ನುಡಿಯಬಾರದು. ನನ್ನ ಮಹಾವೈರಿ ನನಗೆ ಸಚಿವ ನಾಗುವುದೆ! ಅದು ಈ ಜನ್ಮದಲ್ಲಿ ಸಾಧ್ಯವಲ್ಲ.

ಚಾಣಕ್ಯ—ವತ್ಸ, ಅವನನ್ನು ನೀನು ಒಪ್ಪದಿದ್ದರೆ ಮತ್ತೆ ಯಾರನ್ನು ನೇಮಿಸಿ ಕೊಳ್ಳುತ್ತೀಯೆ?

ಚಂದ್ರಗುಪ್ತ—ಆರ್ಯರು ನನ್ನ ಮನಸ್ಸನ್ನು ಪರೀಕ್ಷಿಸುವಂತೆ ತೋರುತ್ತಿದೆ. ತಮ್ಮನ್ನು ಬಿಟ್ಟು ನಾನು ಕ್ಷಣಕಾಲವೂ ಇರಲಾರೆ.

ಚಾಣಕ್ಯ—ನಾನು ಹಾಸ್ಯಕ್ಕಾಗಿ ಹೇಳುತ್ತಿಲ್ಲ. ನನ್ನ ಉದ್ದೇಶ ನೆರವೇರುತ್ತಾ ಬಂತು. ತುಂಬಿದ ಸಭೆಯಲ್ಲಿ ನನಗೆ ಅವಮಾನಮಾಡಿದ ಆ ಉದ್ಧತ ನಂದರನ್ನು ನರಕಕ್ಕೆ ಕಳುಹಿಸಿದ್ದಾಯಿತು; ಶರಣುಹೊಕ್ಕ ನಿನ್ನನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿದ್ದಾಯಿತು. ಮಾಡಿದ ಪ್ರತಿಜ್ಞೆ ಯನ್ನು ಕೊನೆಗಾಣಿಸಿದ್ದಾಯಿತು; ಬಿಚ್ಚಿದ ಶಿಖೆಯನ್ನು ಮತ್ತೆ ಕಟ್ಟಿದ್ದಾಯಿತು. ಇನ್ನು ಎಷ್ಟು ದಿನ ನಿನ್ನ ಬಳಿ ನಾನು ಇದ್ದೇನು? ತಪೋವನವು ಆಗಲೆ ಕರೆಯುತ್ತಿದೆ. ನಿನಗೆ ತಕ್ಕ ಮಂತ್ರಿಯನ್ನು ಒದಗಿಸಿಕೊಟ್ಟರೆ ನಾನು ಕೃತಾರ್ಥನಾದೆ. . . .

ಚಂದ್ರಗುಪ್ತ—ಆರ್ಯರು ಹಾಕಿದ ಗೆರೆಯನ್ನು ನಾನು ಮೀರತಕ್ಕವನಲ್ಲ. ಆದರೆ ಇದೊಂದು ವಿಷಯದಲ್ಲಿ. . . .

ಚಾಣಕ್ಯ—ನಿನಗೆ ತಿಳಿಯದು ವತ್ಸ. ನಿನ್ನ ಹಿತ ನಿನಗಿಂತಲೂ ನನಗೆ ಚೆನ್ನಾಗಿ ಗೊತ್ತು. ನನ್ನ ಉದ್ದೇಶಕ್ಕೆ ಎದುರಾಗಬೇಡ. ರಾಕ್ಷಸನೇನೂ ಸಾಮಾನ್ಯನಲ್ಲ, ನೋಡು. ಲೋಕದಲ್ಲಿ ಸಂಪತ್ತುಳ್ಳ ದೊರೆಯನ್ನು ಜನರು ಹಣಕ್ಕೋಸ್ಕರ ಓಲೈಸುತ್ತಾರೆ. ಅವನಿಗೆ ವಿಪತ್ತು ಒದಗಿ ದಾಗಲೂ ಕೆಲವರು ಹಿಂಬಾಲಿಸುವುದುಂಟು; ಆದರೆ ಅವರಿಗೆ ಕೂಡ ಮುಂದೆ ಈತನು ತಿರುಗಿ ಪ್ರತಿಷ್ಠಿತನಾದಾನು ಎಂಬ ನಿರೀಕ್ಷೆಯಿರು ತ್ತದೆ. ತನ್ನ ದಣಿ ತೀರಿ ಹೋದರೂ ಹಿಂದಿನ ಉಪಕಾರವನ್ನು ಸ್ಮರಿಸಿ

ಕೊಂಡು. ಅವನ ಕಾರ್ಯಭಾರವನ್ನೇ ಸ್ವಾರ್ಥವಿಲ್ಲದೆ ವಹಿಸತಕ್ಕವನು ದುರ್ಲಭ. ಅಂಥ ದೃಢಭಕ್ತಿ ರಾಕ್ಷಸನಿಗಿದೆ. ಅದರ ಜೊತೆಗೆ ಕೌಶಲವಿದೆ; ಸೂಕ್ಷ್ಮಬುದ್ಧಿಯಿದೆ. ಹಿಂದಿನಿಂದ ಈ ರಾಜ್ಯವನ್ನು ನಡಸಿಕೊಂಡು ಬಂದವನು ಅವನು; ಮುಂದೆ ಊರ್ಜಿತಪಡಿಸುವುದಕ್ಕೂ ಅವನೇ ತಕ್ಕವನು. ಅಂಥ ಮಂತ್ರಿ ಸಿಕ್ಕುವುದು ನಿನ್ನ ಅದೃಷ್ಟ.

ಚಂದ್ರಗುಪ್ತ—ಆರ್ಯರು ಹೇಳಿದ್ದು ನಿಜ. ಆದರೆ ನಂದರಲ್ಲಿ ಅಷ್ಟು ದೃಢಭಕ್ತಿಯಿರುವುದರಿಂದಲೇ ರಾಕ್ಷಸನು ನನ್ನ ಮೇಲಿನ ದ್ವೇಷದಿಂದ ಕುದಿಯುತ್ತಿದ್ದಾನೆ; ನನ್ನನ್ನು ಕೊಲ್ಲಿಸಬೇಕೆಂದು ಹೆಣಗುತ್ತಿದ್ದಾನೆ. ಇವನು ನಂದಶತ್ರುವಿನ ಸಚಿವನಾಗುವುದೆಂದರೇನು? ನನಗೇನೋ ಅಸಾಧ್ಯವಾಗಿ ತೋರುತ್ತದೆ.

ಚಾಣಕ್ಯ—ಚಂದ್ರಗುಪ್ತ, ಅಸಾಧ್ಯ ಎನ್ನುವ ಕಾರ್ಯ ಲೋಕದಲ್ಲಿ ಇಲ್ಲ. ಸಾಧಕನಲ್ಲಿ ಸಾಮರ್ಥ್ಯವಿರಬೇಕು, ಅಷ್ಟೆ.

ಚಂದ್ರಗುಪ್ತ—(ಅಭಿಮಾನಾಶ್ಚರ್ಯಗಳಿಂದ ನೋಡುತ್ತಾ) ಬಾಲಕನ ಅಜ್ಞಾನವನ್ನು ಮನ್ನಿಸಬೇಕು. ಆರ್ಯರಿಗೆ ಅಸಾಧ್ಯವಾದದ್ದು ಇಲ್ಲವೆನ್ನುವುದಕ್ಕೆ ನನ್ನ ಅಭ್ಯುದಯವೇ ಸಾಕ್ಷಿ! ತಮ್ಮ ಆಜ್ಞೆಯೇ ನನಗೆ ಮಹಾಪ್ರಸಾದ.

ಚಾಣಕ್ಯ—ನೋಡುತ್ತಿರು ವತ್ಸ. ಮಂತ್ರಕ್ಕೆ ಕಟ್ಟುಬಿದ್ದು ಹಾವು ಮಾಂತ್ರಿಕನ ಬಳಿಗೆ ಬರುವುದನ್ನು ಕ್ಷಿಪ್ರದಲ್ಲೇ ಕಾಣುತ್ತೀಯೆ.

ಚಂದ್ರಗುಪ್ತ—ಆರ್ಯರಲ್ಲಿ ಮತ್ತೊಂದು ಅರಿಕೆಯನ್ನು ಮಾಡಿಕೊಳ್ಳಲೆ?

ಚಾಣಕ್ಯ—ಏನು ಅದು?

ಚಂದ್ರಗುಪ್ತ—ಮಂತ್ರಕ್ಕೆ ಕಟ್ಟು ಬಿದ್ದ ಮಾತ್ರಕ್ಕೆ ಹಾವಿನ ವಿಷವೂ ಮುರಿಯುವುದೆಂದು ಹೇಗೆ ನಂಬಬಹುದು? ವಿಷಸರ್ಪಕ್ಕೆ ತಾನು ಮಲಗುವ ಹಾಸಿಗೆಯಲ್ಲೇ ಅವಕಾಶ ಕೊಡಬಹುದೆ?

ಚಾಣಕ್ಯ—(ನಗುತ್ತಾ) ನಿನ್ನ ಶಂಕೆ ಸಹಜ. ಆದರೆ ರಾಕ್ಷಸನ ಸ್ವಭಾವವನ್ನು ನಾನು ಬಲ್ಲೆ. ನಿನ್ನ ಪ್ರತಿಕಕ್ಷಿಯಾಗಿ ನಿಂತಿರುವಾಗ ಅವನು ನಿನ್ನ

ಕೊಲೆಗಾಗಿ ಸಹಸ್ರ ತಂತ್ರಗಳನ್ನಾದರೂ ಮಾಡುವವನೇ ಸರಿ. ಆದರೆ, ನಿನ್ನ ಸೇವೆಯನ್ನು ಒಪ್ಪಿಕೊಂಡ ಮೇಲೆ ನಿನಗೆ ಎರಡು ಬಗೆಯತಕ್ಕವನಲ್ಲ.

ಚಂದ್ರಗುಪ್ತ—ಆರ್ಯರು ಸರ್ವಜ್ಞರು. . . . ಈಗ ಅವನು ಮಲಯಕೇತುವಿನ ಆಶ್ರಯದಲ್ಲಿದ್ದಾನಲ್ಲವೆ?

ಚಾಣಕ್ಯ—ನೋಡಿದೆಯೋ, ನಾನು ಹೇಳಿದ್ದಕ್ಕೆ ನಿದರ್ಶನ. ನಂದರ ತಂದೆ ಸರ್ವಾರ್ಥಸಿದ್ಧಿ ಈಚೆಗೆ ತಪೋವನದಲ್ಲಿ ತೀರಿಹೋದದ್ದರಿಂದ ಆ ಪೀಳಿಗೆಯ ಬೇರು ಕೂಡ ಉಳಿಯಲಿಲ್ಲ. ಆದಕಾರಣ, ಈ ಪರ್ವತೇಶ್ವರನಲ್ಲಿ ತನಗಿದ್ದ ಪೂರ್ವದ ಅಭಿಮಾನದಿಂದ ಈಗ ಅವನ ಮಗನ ಒಳಿಗೆ ರಾಕ್ಷಸನು ಹೋಗಿದ್ದಾನೆ. ಇರಲಿ, ಆಡುವ ಆಟವನ್ನೆಲ್ಲಾ ಆಡಲಿ. ಕಾಡಿನ ಸುತ್ತಲೂ ಆಗಲೇ ಬಲೆಯನ್ನು ಬೀಸಿದ್ದೇನೆ. ಮೃಗ ಯಾವ ಪೊದರಿನಲ್ಲೇ ಹೊಕ್ಕಿರಲಿ, ಬೇಟೆಗಾರನ ಕೈಗೆ ಸಿಕ್ಕಲೇ ಬೇಕು.

ಚಂದ್ರಗುಪ್ತ—ನನ್ನ ವ್ಯರ್ಥಾಲಾಪದಿಂದ ಆರ್ಯರಿಗೆ ಬೇಸರವಾಯಿತೇನೊ?

ಚಾಣಕ್ಯ—ಇಲ್ಲ, ಇಲ್ಲ. ತುಂಬ ಸಂತೋಷವಾಯಿತು. ನೀನು ಇನ್ನು ಮುಂದೆ ಸ್ವತಂತ್ರವಾಗಿ ವ್ಯವಹಾರಕ್ಕೆ ಮೊದಲು ಮಾಡು. ನನ್ನ ಮೇಲೆ ಸ್ವಲ್ಪ ಅಸಮಾಧಾನಪಟ್ಟಂತೆ ತೋರಿಸಿಕೊಂಡರೂ ಚಿಂತೆಯಿಲ್ಲ. ಅದರ ಪ್ರಯೋಜನವನ್ನು ಮುಂದೆ ಕಾಣಬಹುದು.

ಚಂದ್ರಗುಪ್ತ—ಆರ್ಯರ ಅಪ್ಪಣೆ. ಇನ್ನು ನನಗೆ ಅನುಜ್ಞೆಯನ್ನು ಕೊಡಬೇಕು.

ಚಾಣಕ್ಯ—ವತ್ಸ, ವಿಜಯೀಭವ.

(ಚಂದ್ರಗುಪ್ತನು ಹೊರಟುಹೋಗುವನು.)

ಚಾಣಕ್ಯ—ಒಬ್ಬನು ಒಪ್ಪಿದ್ದಾಯಿತು; ಇನ್ನೊಬ್ಬನು ಒಪ್ಪುವಂತೆ ಮಾಡಬೇಕು.

(ಶಾರ್ಙ್ಗರವನು ಪ್ರವೇಶಿಸುವನು.)

ಶಾರ್ಙ್ಗರವ—ಉಪಾಧ್ಯಾಯರೆ, ಸಿದ್ಧಾರ್ಥಕನು ಬಂದಿದ್ದಾನೆ, ಕರೆತರಲೆ?

ಚಾಣಕ್ಯ—ಅವನು ಬರಲಿ. ನೀನು ಹೋಗಿ ವಿಶ್ವಾವಸುವನ್ನೂ ಅವನ ಇಬ್ಬರು

ತಮ್ಮಂದಿರನ್ನೂ ಚಂದ್ರಗುಪ್ತನ ಬಳಿಗೆ ನಾನು ಹೇಳಿದೆನೆಂದು ಕಳುಹಿಸಿಕೊಡು. ಅಲ್ಲಿ ಅವನು ಕೆಲವು ಆಭರಣಗಳನ್ನು ದಾನವಾಗಿ ಕೊಡುತ್ತಾನೆ. ಅವನ್ನು ಪಡೆದ ಬಳಿಕ ಅವರು ನನ್ನನ್ನು ನೋಡಲಿ.

ಶಾರ್ಙ್ಗರವ—ಅಪ್ಪಣೆ. (ಹೋಗುವನು.)

(ಬಳಿಕ ಸಿದ್ಧಾರ್ಥಕನು ಪ್ರವೇಶಿಸುವನು.)

ಸಿದ್ಧಾರ್ಥಕ—ಪೂಜ್ಯರಿಗೆ ಜಯವಾಗಲಿ.

ಚಾಣಕ್ಯ—ಬಾ ಸಿದ್ಧಾರ್ಥಕ. ಕುಳಿತುಕೊ. ನೀನು ರಾಯಸದ ಶಕಟದಾಸನನ್ನು ಬಲ್ಲೆಯಷ್ಟೆ.

ಸಿದ್ಧಾರ್ಥಕ—ಹೌದು, ಚೆನ್ನಾಗಿ ಬಲ್ಲೆ. ಅವನ ಹೆಂಡತಿಗೆ ಹಿಡಿದಿದ್ದ ಪಿಶಾಚಿಯನ್ನು ನಾನು ಬಿಡಿಸಿದೀಚೆಗಂತೂ ಅವನಿಗೆ ನನ್ನಲ್ಲಿ ಪರಮ ವಿಶ್ವಾಸ.

ಚಾಣಕ್ಯ—ಹಾಗಾದರೆ ನಿನಗೆ ಒಂದು ಲೇಖವನ್ನು ಕೊಡುತ್ತೇನೆ. (ತಾನು ಬರೆದಿಟ್ಟಿದ್ದ ಪತ್ರವನ್ನು ತೆಗೆದುಕೊಂಡು ಅದಕ್ಕೆ ಎರಡು ಪಂಕ್ತಿಗಳನ್ನು ಹೊಸದಾಗಿ ಸೇರಿಸಿ, ಕೊಡುತ್ತಾ) ಈ ಲೇಖವನ್ನು ಯಾರು ಯಾರಿಗೆ ಬರೆದಿದ್ದಾರೆ ಎನ್ನುವುದು ಅಪ್ರಕೃತ; ಆದಕಾರಣ ಹೆಸರುಗಳನ್ನು ಸೇರಿಸಿಲ್ಲ. ಒಳಗಿನ ವಿಷಯ ಮಾತ್ರ ಮುಖ್ಯ. ಇದನ್ನು ಈಗಲೇ ಶಕಟದಾಸನ ಬಳಿಗೆ ತೆಗೆದುಕೊಂಡು ಹೋಗು. "ಇದರ ವೈದಿಕ ಲಿಪಿ ಸ್ಫುಟವಾಗಿಲ್ಲ; ಬೇರೆ ಪ್ರತಿ ಮಾಡಿಕೊಡು" ಎಂದು ಅವನಿಗೆ ಸಂಶಯ ಹುಟ್ಟದಂತೆ ಹೇಳಿ, ಇದರಂತೆಯೇ ಮತ್ತೊಂದು ಲೇಖವನ್ನು ಅವನ ಅಕ್ಷರದಲ್ಲಿ ಬರಸಿಕೊಂಡು ಮತ್ತೆ ಇಲ್ಲಿಗೆ ಬಾ. ನಾನು ನಿನ್ನನ್ನು ಕಳುಹಿಸಿದೆನೆಂದು ಮಾತ್ರ ಶಕಟದಾಸನಿಗೆ ತಿಳಿದೀತು.

ಸಿದ್ಧಾರ್ಥಕ—ಅಪ್ಪಣೆ (ಹೋಗುವನು.)

ಚಾಣಕ್ಯ—(ಸ್ವಲ್ಪ ಹೊತ್ತು ಯೋಚಿಸುತ್ತಾ ಕುಳಿತು) ಶಾರ್ಙ್ಗರವ, ಶಾರ್ಙ್ಗರವ! . . . (ಮತ್ತೆ) ಶಾರ್ಙ್ಗರವ! . . . ಓಹೋ ವಿಶ್ವಾವಸುವಿಗೆ ಹೇಳುವುದಕ್ಕೆ ಹೋಗಿರಬೇಕು. ಪಾಪ, ಆ ವಟುವಿಗೆ ಈ ಹೊತ್ತು ತುಂಬ ಓಡಾಟ. ಉದ್ದಾಲಕನೆಲ್ಲೋ? ಬೆಳಗಿನಿಂದ ಕಾಣಿಸಿಕೊಂಡೇ ಇಲ್ಲ. ಬರಲಿ.

(ಕ್ಷಣ ಕಾಲದ ಮೇಲೆ ಒದ್ದೆಯ ಬಟ್ಟೆಗಳನ್ನು ಹಿಡಿದುಕೊಂಡು ಉದ್ದಾಲಕನು ಪ್ರವೇಶಿಸುವನು.)

ಚಾಣಕ್ಯ—ಉದ್ದಾಲಕ, ಇದುವರೆಗೆ ಎಲ್ಲಿ ಹೋಗಿದ್ದೆ ?

ಉದ್ದಾಲಕ—ನದೀತೀರಕ್ಕೆ. ಅಲ್ಲಿ . . .

ಚಾಣಕ್ಯ—ಆ ಮಾತೆಲ್ಲ ಆಮೇಲೆ. ಮೊದಲು ಆ ಬಟ್ಟೆಗಳನ್ನು ಹಾಗೇ ಇರಿಸಿಬಿಡು. (ಉದ್ದಾಲಕನು ಇರಿಸುವನು.) ಈ ಕೂಡಲೆ ಹೋಗಿ ದಂಡಪಾಶಿಕನನ್ನು ಇಲ್ಲಿಗೆ ಕಳುಹಿಸು. ಜೀವಸಿದ್ಧಿ ಶಕಟದಾಸರ ವಿಚಾರವಾಗಿ ಅವನಿಗೆ ನಾನು ಕೆಲವು ಮಾತು ಹೇಳಬೇಕಾಗಿದೆ.

ಉದ್ದಾಲಕ—ಅಪ್ಪಣೆ. (ಹೊರಡುವನು.)

ಚಾಣಕ್ಯ—ತಾಳು, ತಾಳು. ರತ್ನಪಡಿ ವರ್ತಕ ಚಂದನದಾಸನನ್ನು ನಾನು ನೋಡಬೇಕು. ನೀನು ಬರುವಾಗ ಜೊತೆಯಲ್ಲೇ ಅವನನ್ನೂ ಕರೆದುಕೊಂಡುಬಾ.

ಉದ್ದಾಲಕ—(ಹೋಗದೆ) ಇನ್ನೂ ಯಾರನ್ನಾದರೂ ಕರೆಯಬೇಕೆ, ಉಪಾಧ್ಯಾಯರೆ ?

ಚಾಣಕ್ಯ—(ನಕ್ಕು) ಬೇಕಾದರೆ ಮತ್ತೆ ಕೂಗುತ್ತೇನೆ. ಈಗ ಹೊರಡು.

(ಉದ್ದಾಲಕನು ಹೊರಡುವನು.)

ತೆರೆ.

## ದೃಶ್ಯ : ೨

(ಸ್ಥಾನ ಮೊದಲಿನಂತೆಯೇ ಚಾಣಕ್ಯನ ಕುಟೀರ; ವೇದಿಕೆಯ ಮೇಲಿನ ಪೀಠಗಳು ಮಾತ್ರ ಸ್ವಲ್ಪ ಹಿಂದುಗಡೆ ಮರೆಯಲ್ಲಿರುವುವು. ಚಾಣಕ್ಯನು ಹೊರಗಿನಿಂದ ಪ್ರವೇಶಿಸುವನು.)

ಚಾಣಕ್ಯ—(ಅತ್ತಿತ್ತ ನೋಡುತ್ತಾ) ಶಾರ್ಙ್ಗರವ, ಶಾರ್ಙ್ಗರವ !

ಶಾರ್ಙ್ಗರವ—(ಕುಟೀರದೊಳಗಿನಿಂದ ಬಂದು) ಬಂದೆ ಉಪಾಧ್ಯಾಯರೆ. ಏನಪ್ಪಣೆ ?

ಚಾಣಕ್ಯ—ನಾನು ಎಲ್ಲಿ ಕುಳಿತುಕೊಳ್ಳಲಿ ?

ಶಾರ್ಙ್ಗರವ—(ಪೀಠವನ್ನು ಮುಂದಕ್ಕೆ ಸ್ವಲ್ಪ ಎಳೆದು) ಇಲ್ಲೇ ವೇತ್ರಾಸನವಿದೆ! ಅದರ ಮೇಲೆ ಕುಳಿತುಕೊಳ್ಳಬಹುದು.

ಚಾಣಕ್ಯ—ವತ್ಸ, ಮನಸ್ಸಿಗೆ ಏನೂ ತಿಳಿದುಕೊಳ್ಳಬೇಡ. ಕಾರ್ಯಭಾರ ದಿಂದ ವ್ಯಾಕುಲನಾಗಿ ಹೀಗಾಡುತ್ತಿದ್ದೇನೆಯೇ ಹೊರತು ಶಿಷ್ಯರಲ್ಲಿ ಉಪಾಧ್ಯಾಯರಿಗೆ ಸಹಜವಾದ ದೌರ್ಜನ್ಯದಿಂದ ಅಲ್ಲ. (ಕುಳಿತು ಕೊಂಡು) ಏನಾದರೂ ವಿಶೇಷವುಂಟೋ?

ಶಾರ್ಙ್ಗರವ—ನಿಪುಣಕನು ಈ ಲೇಖವನ್ನು ತಂದುಕೊಟ್ಟು ಹೋದನು. ಅದನ್ನು ತಮಗೆ ಕೊಡುವುದಕ್ಕಾಗಿ ಕೈಯಲ್ಲೇ ಹಿಡಿದುಕೊಂಡಿ ದ್ದೇನೆ. (ನೀಡುವನು.)

ಚಾಣಕ್ಯ—ಇಲ್ಲಿ ತಾ. (ಪತ್ರವನ್ನು ತೆರೆಯುತ್ತಾ) ನಾನಿಲ್ಲದಿರುವಾಗ ಸಿದ್ಧಾ ರ್ಥಕನೇನಾದರೂ ಬಂದಿದ್ದನೆ?

ಶಾರ್ಙ್ಗರವ—ಇಲ್ಲ.

ಚಾಣಕ್ಯ—ಬರುತ್ತಿದ್ದಾನೆಯೇ ನೋಡು.

(ಶಾರ್ಙ್ಗರವನು ಹೋಗುವನು.)

ಚಾಣಕ್ಯ—(ಲೇಖವನ್ನು ತೆಗೆದುಕೊಂಡು ನೋಡುತ್ತಾ) ಓಹೋ ಭದ್ರಭಟಾದಿಗಳ ಲೇಖ. (ಓದಿಕೊಳ್ಳುವನು.)

"ಸ್ವಸ್ತಿ. ಆಳುವ ಮಹಾಸ್ವಾಮಿಯವರಾದ ಚಂದ್ರಗುಪ್ತ ಮಹಾರಾಜರ ಅಭ್ಯುದಯವನ್ನೇ ಅವಲಂಬಿಸಿ, ಅವರೊಂದಿಗೆ ಸಹೋತ್ಥಾಯಿಗಳಾಗಿ ನಿಂತ ಗಜಾಧ್ಯಕ್ಷ ಭದ್ರಭಟ, ಅಶ್ವಾಧ್ಯಕ್ಷ ಪುರುಷದತ್ತ, ಮಹಾಪ್ರತೀಹಾರ ಚಂದ್ರಭಾನುವಿನ ಸೋದರಳಿಯ ಡಿಂಗಿರಾತ, ಮಹಾಸ್ವಾಮಿಯವರ ಜ್ಞಾತಿ ಬಲದೇವಗುಪ್ತ, ಕುಮಾರಸೇವಕ ರಾಜಸೇನ, ಸೇನಾಪತಿ ಸಿಂಹಬಲನ ತಮ್ಮ ಭಾಗುರಾಯಣ, ಮಾಲವದೇಶದ ಅರಸುಮಗ ಲೋಹಿತಾಕ್ಷ, ಕ್ಷತ್ರಿಯಮುಖ್ಯ ವಿಜಯವರ್ಮ—ಈ ಪ್ರಧಾನಪುರುಷರು ಮಲಯ ಕೇತುವಿನ ನಿಗ್ರಹಕ್ಕಾಗಿ ಸಂಶಯ ಹುಟ್ಟದಂತೆ ವಿವಿಧ ರೀತಿಗಳಿಂದ ಅವನ ಬಳಿ ಆಶ್ರಯ ಪಡೆದ ಬಳಿಕ ಬರೆದುಕೊಟ್ಟಿರುವ ಪ್ರಮಾಣ

ಲೇಖ್ಯಪತ್ರವಿದು. ಮೇಲೆ ಹೇಳಿದ ನಾವೆಲ್ಲರೂ ಮಹಾಸ್ವಾಮಿಯವರ ಕಾರ್ಯದಲ್ಲೇ ಜಾಗರೂಕರಾಗಿರುತ್ತೇವೆ.''

ಸರಿ, ಮಲಯಕೇತುವಿನ ಹತ್ತಿರ ಇವರಿಗೆ ಅವಕಾಶ ದೊರೆಯಿತಲ್ಲ. ಇನ್ನು ಅವನು ಭಾಗುರಾಯಣನ ಕೈಬೊಂಬೆಯೇ ಆಗುತ್ತಾನೆ. ರಾಕ್ಷಸನ ತಂತ್ರಗಳು ಅಲ್ಲಿ ಸಾಗಲಾರವು. . . .

(ಸಿದ್ಧಾರ್ಥಕನು ಪ್ರವೇಶಿಸುವನು.)

ಸಿದ್ಧಾರ್ಥಕ—ಪೂಜ್ಯರಿಗೆ ಜಯವಾಗಲಿ. ತಾವು ಕೊಟ್ಟ ಲೇಖವನ್ನು ಶಕಟದಾಸನ ಅಕ್ಷರದಲ್ಲಿ ಬರಸಿಕೊಂಡು ಬಂದಿದ್ದೇನೆ. (ಕೊಡುವನು.)

ಚಾಣಕ್ಯ—(ಕೈಗೆ ತೆಗೆದುಕೊಂಡು) ಅಕ್ಷರಗಳು ಮುತ್ತಿನ ಹಾಗಿವೆ. ಈ ಮುದ್ರಿಕೆಯಿಂದ ಪತ್ರಕ್ಕೆ ಮೊಹರುಮಾಡು. (ರಾಕ್ಷಸನ ಮುದ್ರಿಯನ್ನು ಕೊಡುವನು.)

ಸಿದ್ಧಾರ್ಥಕ—(ಹಾಗೆ ಮಾಡಿ) ಆಯಿತು. (ಮುದ್ರಿಕೆಯನ್ನು ಹಿಂದಕ್ಕೆ ಕೊಡಲು ಕೈನೀಡಿ) ಮತ್ತೇನು ಮಾಡಲಿ?

ಚಾಣಕ್ಯ—ಈ ಮುದ್ರಿಕೆ ನಿನ್ನ ಹತ್ತಿರವೇ ಇರಲಿ; ಅದರಿಂದ ಕೆಲಸವುಂಟು. ಅಯ್ಯಾ, ನಿನ್ನ ಚಾತುರ್ಯಕ್ಕೆ ಮೆಚ್ಚಿದೆನು. ಆಪ್ತರಿಗೆ ಮಾತ್ರ ಹೇಳುವ ಕೆಲಸವೊಂದಕ್ಕೆ ನಿನ್ನನ್ನು ನೇಮಿಸಬೇಕೆಂದಿದ್ದೇನೆ.

ಸಿದ್ಧಾರ್ಥಕ—(ಹರ್ಷದಿಂದ) ಪೂಜ್ಯರ ಅನುಗ್ರಹ. ಈ ದಾಸನಿಂದ ಏನು ಸೇವೆಯಾಗಬೇಕೋ ಅಪ್ಪಣೆ ಕೊಡಿಸಬೇಕು.

ಚಾಣಕ್ಯ—ಶಕಟದಾಸನನ್ನು ಶೂಲಕ್ಕೇರಿಸುವಂತೆ ಆಜ್ಞೆಮಾಡಿದ್ದೇನೆ. ನೀನು . . .

ಸಿದ್ಧಾರ್ಥಕ—(ಬೆಚ್ಚಿ) ನಾನು . . . ಕೊಲ್ಲಬೇಕೆ?

ಚಾಣಕ್ಯ—(ನಕ್ಕು) ಬೆದರಬೇಡ. ನೀನು ಅವನನ್ನು ಕೊಲ್ಲಬೇಕಾಗಿಲ್ಲ, ರಕ್ಷಿಸಬೇಕು. ಮೊದಲು ನೀನು ವಧ್ಯಸ್ಥಾನಕ್ಕೆ ಖಡ್ಗಪಾಣಿಯಾಗಿ ಹೋಗಿ ಸ್ವಲ್ಪ ರೋಷವನ್ನು ನಟಿಸು. ಕೊಲೆಗಾರರಿಗೆ ಬಲಗಣ್ಣಿನಿಂದ ಸನ್ನೆಮಾಡಿದರೆ ಅವರು ಹೆದರಿದವರಂತೆ ಓಡಿಹೋಗುತ್ತಾರೆ. ಕೂಡಲೆ ಶಕಟದಾಸನನ್ನು ಕರೆದುಕೊಂಡು ಹೋಗಿ ರಾಕ್ಷಸನ

ಹತ್ತಿರ ಬಿಡಬೇಕು. ತನ್ನ ಮಿತ್ರನ ಪ್ರಾಣವನ್ನು ರಕ್ಷಿಸಿದ್ದಕ್ಕಾಗಿ ಅವನು ನಿನಗೆ ಏನಾದರೂ ಪಾರಿತೋಷಿಕವನ್ನು ಕೊಡುತ್ತಾನೆ. ಅದನ್ನು ಸ್ವೀಕರಿಸಿ ರಾಕ್ಷಸನ ಸೇವೆಯಲ್ಲಿ ಕೆಲವು ದಿನಗಳಿರಬೇಕು. ಬಳಿಕ . . . . ಇಲ್ಲಿ ಹತ್ತಿರಕ್ಕೆ ಬಾ. (ಸಿದ್ಧಾರ್ಥಕನು ಬರುವನು. ಚಾಣಕ್ಯನು ಕಿವಿಯಲ್ಲಿ ಏನೇನೋ ಹೇಳುವನು.) . . . ತುಂಬ ಜಾಣತನ ದಿಂದ ನಡೆದುಕೊ.

ಸಿದ್ಧಾರ್ಥಕ—ಪೂಜ್ಯರ ಅಪ್ಪಣೆ.

(ಉದ್ದಾಲಕನು ಪ್ರವೇಶಿಸುವನು.)

ಉದ್ದಾಲಕ—ಉಪಾಧ್ಯಾಯರೆ, ದಂಡಪಾಶಿಕನು ಬಂದಿದ್ದನೆ?

ಚಾಣಕ್ಯ—ಬಂದು ಹೋಗಿ ಎಷ್ಟೋ ಹೊತ್ತಾಯಿತು. (ಸಿದ್ಧಾರ್ಥಕನಿಗೆ) ನೀನಿನ್ನು ಹೊರಡು.

(ಸಿದ್ಧಾರ್ಥಕನು ಹೋಗುವನು.)

ಚಾಣಕ್ಯ—ಚಂದನದಾಸಸೆಟ್ಟಿ ಎಲ್ಲಿ?

ಉದ್ದಾಲಕ—ನನ್ನ ಜೊತೆಯಲ್ಲಿ ಕರೆದುತಂದಿದ್ದೇನೆ. ಅದಕ್ಕೇ ಇಷ್ಟು ತಡವಾಯಿತು.

ಚಾಣಕ್ಯ—ಏಕೆ ತಡ?

ಉದ್ದಾಲಕ—ನಾನು ಹೋದಕೂಡಲೆ ಮನೆಯಲ್ಲಿ ಸಿಕ್ಕಿದನು. ತಮ್ಮ ಅಪ್ಪಣೆಯನ್ನು ತಿಳಿಸುತ್ತಲೂ ಸ್ವಲ್ಪ ಯೋಚಿಸಿ, "ಬರುತ್ತೇನೆ" ಎಂದು ಹೇಳಿದನು. ನಾನು "ಹೊರಡು" ಎಂದೆ. ಅದಕ್ಕೆ "ನನ್ನ ಬಟ್ಟೆಗಳು ಬಹಳ ಕೊಳೆಯಾಗಿವೆ. ದೊಡ್ಡವರನ್ನು ನೋಡುವುದಕ್ಕೆ ಮಡಿಯುಟ್ಟು ಬರಬೇಕು; ಸ್ವಲ್ಪ ಅವಕಾಶ ಕೊಡು" ಎಂದು ಹೇಳಿ ಒಳಕ್ಕೆ ಹೋದವನು ಎಷ್ಟು ಹೊತ್ತಾದರೂ ಬರಲೇ ಇಲ್ಲ. ನಾನು ತ್ವರೆಪಡಿಸಿದ ಮೇಲೆ ಒಳಗಿನಿಂದ ಹೊರಟನು.

ಚಾಣಕ್ಯ—(ತನ್ನಲ್ಲಿ) ಆಹಾ, ಏನೋ ಏರ್ಪಾಡುಮಾಡಿ ಬಂದಿದ್ದಾನೆ! (ಪ್ರಕಾಶವಾಗಿ) ಬಂದಿದ್ದಾನಷ್ಟೆ. ಇಲ್ಲಿಗೆ ಕಳುಹಿಸು.

(ಉದ್ದಾಲಕನು ಹೊರಗೆ ಹೋಗುವನು. ಬಳಿಕ ಚಂದನದಾಸನು ಪ್ರವೇಶಿಸುವನು.)

ಚಂದನದಾಸ—ಪೂಜ್ಯರಿಗೆ ಜಯವಾಗಲಿ.

ಚಾಣಕ್ಯ—(ನೋಡಿ) ಸೆಟ್ಟರೆ, ಸ್ವಾಗತ. ಈ ಪೀಠದ ಮೇಲೆ ಕುಳಿತುಕೊಳ್ಳಿ. (ಮತ್ತೊಂದು ವೇತ್ರಾಸನವನ್ನು ತೋರಿಸುವನು.)

ಚಂದನದಾಸ—(ಕೈಮುಗಿದು) ಹಾಗುಂಟೆ? ಯೋಗ್ಯತೆಗೆ ಮೀರಿದ ಉಪಚಾರದಿಂದ ಮನಸ್ಸು ನೋಯುವಷ್ಟು ಅವಮಾನದಿಂದಲೂ ನೋಯುವುದಿಲ್ಲ. ಪೂಜ್ಯರಿಗೆ ಇದು ತಿಳಿಯದೆ? ನನಗೆ ಈ ನೆಲವೇ ಸರಿ; ಇಲ್ಲೇ ಕೆಳಗೆ ಕುಳಿತುಕೊಳ್ಳುತ್ತೇನೆ.

ಚಾಣಕ್ಯ—ಹಾಗಲ್ಲ, ಸೆಟ್ಟರೆ. ನಮ್ಮಂಥವರು ನಿಮಗೆ ಹೀಗೆ ಮರ್ಯಾದೆ ಮಾಡುವುದು ಕೇವಲ ಶಿಷ್ಟಾಚಾರ. ಪೀಠದ ಮೇಲೆಯೇ ಕುಳಿತುಕೊಳ್ಳಿ.

ಚಂದನದಾಸ—(ತನ್ನಲ್ಲಿ) ಈ ದುಷ್ಟನು ಏನನ್ನೋ ಹೂಡಿದ್ದಾನೆ. (ಪ್ರಕಾಶವಾಗಿ) ಪೂಜ್ಯರ ಅಪ್ಪಣೆ. (ವೇತ್ರಾಸನದ ಮೇಲೆ ಕುಳಿತುಕೊಳ್ಳುವನು.)

ಚಾಣಕ್ಯ—ಚಂದನದಾಸಸೆಟ್ಟಿ, ನಿಮ್ಮ ವ್ಯಾಪಾರಗಳಲ್ಲಿ ಲಾಭವು ವರ್ಧಿಸುತ್ತಿದೆಯಷ್ಟೆ?

ಚಂದನದಾಸ—(ತನ್ನಲ್ಲಿ) ಆದರ ಅತಿಯಾಯಿತು; ಅದರ ಹಿಂದೆ ಏನೋ ಇರಬೇಕು. (ಪ್ರಕಾಶವಾಗಿ) ಆಹಾ! ಪೂಜ್ಯರ ಅನುಗ್ರಹದಿಂದ ನನ್ನ ವಾಣಿಜ್ಯ ಕುಂದಿಲ್ಲದೆ ಸಾಗುತ್ತಿದೆ.

ಚಾಣಕ್ಯ—ಚಂದ್ರಗುಪ್ತನ ದೋಷಗಳ ಮೂಲಕ ಪ್ರಜೆಗಳು ಹಿಂದಿನ ದೊರೆಗಳನ್ನು ನೆನಸಿಕೊಳ್ಳುತ್ತಿಲ್ಲವಷ್ಟೆ.

ಚಂದನದಾಸ—(ಕಿವಿಗಳನ್ನು ಮುಚ್ಚಿಕೊಂಡು) ಶಾಂತಂ ಪಾಪಂ! ಶರತ್ಕಾಲದಲ್ಲಿ ಮೂಡಿದ ಪೂರ್ಣಚಂದ್ರನನ್ನು ಕಂಡಂತೆ ಚಂದ್ರಗುಪ್ತ ಮಹಾರಾಜರನ್ನು ಪಡೆದು ಬಹಳ ಆನಂದಪಡುತ್ತಿದ್ದಾರೆ.

ಚಾಣಕ್ಯ—ಅಯ್ಯಾ ಸೆಟ್ಟಿ, ಹೀಗಿದ್ದರೆ, ಸಂತುಷ್ಟರಾದ ಪ್ರಜೆಗಳಿಂದ ರಾಜರು ಪ್ರತಿಫಲವನ್ನು ಬಯಸುತ್ತಾರೆ.

ಚಂದನದಾಸ—ನನ್ನಿಂದ ಏನನ್ನು, ಎಷ್ಟನ್ನು ಬಯಸಲಾಗಿದೆಯೋ ಪೂಜ್ಯರು ಅಪ್ಪಣೆ ಕೊಡಿಸಬೇಕು.

ಚಾಣಕ್ಯ—ಇದು ಚಂದ್ರಗುಪ್ತನ ರಾಜ್ಯ; ನಂದರಾಜ್ಯವಲ್ಲ. ಹಣದ ಹುಚ್ಚು ಹಿಡಿದಿದ್ದ ನಂದನಿಗೆ ಹಣದ ಮೂಲಕ ಪ್ರೀತಿ ಹುಟ್ಟುತ್ತಿತ್ತು. ಚಂದ್ರಗುಪ್ತನಿಗಾದರೆ ನೀವು ಕ್ಲೇಶವಿಲ್ಲದೆ ಬಾಳುವುದರಲ್ಲೇ ಪ್ರೀತಿ.

ಚಂದನದಾಸ—(ಹರ್ಷದಿಂದ) ಪೂಜ್ಯರ ಅನುಗ್ರಹ.

ಚಾಣಕ್ಯ—ಅಯ್ಯಾ ಸೆಟ್ಟಿ, ಆ ಕ್ಲೇಶವಿಲ್ಲದ ಬಾಳು ಹೇಗೆ ಒದಗುವುದೆಂದು ನೀನು ನಮ್ಮನ್ನು ಕೇಳಬೇಡವೆ?

ಚಂದನದಾಸ—ಪೂಜ್ಯರು ಅಪ್ಪಣೆ ಕೊಡಿಸಬೇಕು.

ಚಾಣಕ್ಯ—ಸಂಕ್ಷೇಪವಾಗಿ ಹೇಳುವುದಾದರೆ: ರಾಜನಿಗೆ ಎದುರುಬೀಳ ದಂತೆ ನಡೆದುಕೊಳ್ಳಬೇಕು.

ಚಂದನದಾಸ—ಮಹಾರಾಜರಿಗೆ ಎದುರುಬಿದ್ದವನೆಂದು ತಾವು ಭಾವಿಸುವ ನಿರ್ಭಾಗ್ಯ ಯಾರಿರಬಹುದು!

ಚಾಣಕ್ಯ—ನೀನೇ ಮೊಟ್ಟಮೊದಲು.

ಚಂದನದಾಸ—(ಕಿವಿಗಳನ್ನು ಮುಚ್ಚಿಕೊಂಡು) ಶಾಂತಂ ಪಾಪಂ, ಶಾಂತಂ ಪಾಪಂ! ಹುಲ್ಲುಕಡ್ಡಿಗೆ ಬೆಂಕಿಯೊಡನೆ ಎಂಥ ವಿರೋಧ?

ಚಾಣಕ್ಯ—ಇಂಥ ವಿರೋಧ: ನೀನು ಇಂದಿಗೂ ಕೂಡ ರಾಜದ್ರೋಹಿ ಯಾದ ಅಮಾತ್ಯ ರಾಕ್ಷಸನ ಕುಟುಂಬವನ್ನು ಮನೆಯಲ್ಲಿ ಇರಿಸಿ ಕೊಂಡು ರಕ್ಷಿಸುತ್ತಿದ್ದೀಯೆ.

ಚಂದನದಾಸ—ಪೂಜ್ಯರೆ, ಯಾರೋ ತಿಳಿಯದವನು ಈ ಸುಳ್ಳನ್ನು ತಮಗೆ ಅರಿಕೆಮಾಡಿರಬೇಕು.

ಚಾಣಕ್ಯ—ಬೆದರಬೇಕಾಗಿಲ್ಲ ಸೆಟ್ಟಿ. ಹಿಂದಿನ ರಾಜರ ಅಧಿಕಾರಿಗಳು ಭಯ ದಿಂದ ದೇಶಾಂತರಕ್ಕೆ ಹೋಗುವಾಗ, ಪುರನಿವಾಸಿಗಳ ಮನೆಯಲ್ಲಿ ಬಲಾತ್ಕಾರವಾಗಿ ತಮ್ಮ ಕುಟುಂಬದವರನ್ನು ಬಿಟ್ಟು ಹೋಗುವು ದುಂಟು. ಆ ಅಂಶವನ್ನು ಮರೆಮಾಚುವುದು ಅಪರಾಧವಾಗುತ್ತದೆ.

ಚಂದನದಾಸ—ಇಲ್ಲಿ ನಡೆದಿರುವುದು ಹಾಗೆಯೇ. ಆ ಸಮಯದಲ್ಲಿ ಅಮಾತ್ಯ ರಾಕ್ಷಸನ ಕುಟುಂಬ ನನ್ನ ಮನೆಯಲ್ಲಿ ಇದ್ದದ್ದುಂಟು.

ಚಾಣಕ್ಯ—ಸುಳ್ಳೆಂದು ಮೊದಲು ಹೇಳಿದೆ; ಇದ್ದದ್ದು ಉಂಟೆಂದು ಈಗ ಹೇಳುತ್ತೀಯೆ. ಮಾತುಗಳಲ್ಲಿ ಪರಸ್ಪರ ವಿರೋಧ ಹುಟ್ಟಿತಲ್ಲ!

ಚಂದನದಾಸ—ಇದು ನನ್ನ ಬಾಯಿತಪ್ಪು; ಅಷ್ಟೆ.

ಚಾಣಕ್ಯ—ಅಯ್ಯಾ ಸೆಟ್ಟಿ, ಚಂದ್ರಗುಪ್ತನು ರಾಜನಾಗಿರುವಾಗ ಯಾವ ತಪ್ಪೂ ಇರಕೂಡದು. ರಾಕ್ಷಸನ ಕುಟುಂಬವನ್ನು ತಂದು ಒಪ್ಪಿಸಿಬಿಡು. ನಿನ್ನ ತಪ್ಪು ಸರಿಹೋಗುತ್ತದೆ.

ಚಂದನದಾಸ—ಆಗಲೇ ಪೂಜ್ಯರಿಗೆ ಅರಿಕೆಮಾಡಿಕೊಂಡೆನಲ್ಲ: ಅಮಾತ್ಯ ರಾಕ್ಷಸನ ಕುಟುಂಬದವರು ನನ್ನ ಮನೆಯಲ್ಲಿ ಆಗ ಇದ್ದರು.

ಚಾಣಕ್ಯ—ಹಾಗಾದರೆ ಈಗ ಎಲ್ಲಿ ಹೋದರು?

ಚಂದನದಾಸ—ನನಗೆ ಗೊತ್ತಿಲ್ಲ.

ಚಾಣಕ್ಯ—(ನಸುನಕ್ಕು) ಗೊತ್ತಿಲ್ಲ? ಅಯ್ಯಾ ಸೆಟ್ಟಿ, ನೆತ್ತಿಯ ಮೇಲೆ ಸರ್ಪ; ಹಿಮಾಚಲದಲ್ಲಿ ಅದಕ್ಕೆ ಔಷಧಿ. ಸ್ವಲ್ಪ ಆಲೋಚನೆಮಾಡಿ ನೋಡು. ನಂದರನ್ನು ಚಾಣಕ್ಯನು (ಸ್ವಲ್ಪ ಲಜ್ಜೆಯನ್ನು ತೋರ್ಪಡಿಸಿ) ಛೇದಿಸಿದಂತೆ ಚಂದ್ರಗುಪ್ತನನ್ನು ರಾಕ್ಷಸನು ಛೇದಿಸುವನೆಂದು ನೆಚ್ಚಿ ಶಂಕೆ ಪಡಬೇಡ.

ಚಂದನದಾಸ—(ತನ್ನಲ್ಲಿ) ಆತ್ಮಸ್ತುತಿ! ಆದರೂ ದಿಟ.

(ನೇಪಥ್ಯದಲ್ಲಿ ಕಲಕಲವಾಗುವುದು.)

ಚಾಣಕ್ಯ—ಇದೇನು ಗದ್ದಲ, ಶಾರ್ಙ್ಗರವ?

(ಶಾರ್ಙ್ಗರವನು ಬರುವನು.)

ಶಾರ್ಙ್ಗರವ—ಉಪಾಧ್ಯಾಯರೆ, ಕ್ಷಪಣಕ ಜೀವಸಿದ್ಧಿಯನ್ನು ಊರುಬಿಟ್ಟು ಹೊರಡಿಸುತ್ತಿದ್ದಾರೆ. ಅಗೋ ಸಾರುವ ಕೂಗು.

(ನೇಪಥ್ಯದಲ್ಲಿ:)

"ಎಚ್ಚರಿಕೆ. ಎಚ್ಚರಿಕೆ. ಈ ಜೀವಸಿದ್ಧಿಯೆಂಬ ಬೌದ್ಧಭಿಕ್ಷು ರಾಕ್ಷಸನ ಪ್ರೇರಣೆಗೆ ಒಳಗಾಗಿ, ವಿಷಕನ್ಯೆಯ ಮೂಲಕ ಪರ್ವತೇಶ್ವರ

ರನ್ನು ಕೊಲ್ಲಿಸಿದ ಕಾರಣ, ಇವನಿಗೆ ತುಂಬ ಅವಮಾನಪಡಿಸಿ ಊರಿನಲ್ಲಿ ಮೆರವಣಿಗೆ ಮಾಡಿಸಿ ಹೊರಕ್ಕೆ ತಳ್ಳಬೇಕೆಂದು ಚಂದ್ರಗುಪ್ತ ಮಹಾರಾಜರ ಅಪ್ಪಣೆ. ಹೋ!"

ಚಾಣಕ್ಯ—ಬೌದ್ಧಭಿಕ್ಷುವೇ? ಅಯ್ಯೋ ಪಾಪ! . . . . ಛೀ ಮರುಗಬಾರದು. ರಾಜದ್ರೋಹದ ಫಲವನ್ನು ಅನುಭವಿಸಲಿ. ಚಂದನದಾಸ ಸೆಟ್ಟಿ, ರಾಜದ್ರೋಹಿಗಳಿಗೆ ಈ ರೀತಿಯ ಕ್ರೂರಶಿಕ್ಷೆಯನ್ನು ದೊರೆ ವಿಧಿಸುತ್ತಾನೆ. ಮಿತ್ರನ ಹಿತವಚನದಂತೆ ಮಾಡು. ರಾಕ್ಷಸನ ಕುಟುಂಬವನ್ನು ತಂದು ಒಪ್ಪಿಸಿ ರಾಜಾನುಗ್ರಹವನ್ನು ಬಹುಕಾಲ ಅನುಭವಿಸು.

ಚಂದನದಾಸ—ನನ್ನ ಮನೆಯಲ್ಲಿ ಅಮಾತ್ಯ ರಾಕ್ಷಸನ ಕುಟುಂಬ ಖಂಡಿತವಾಗಿ ಇಲ್ಲ.

(ನೇಪಥ್ಯದಲ್ಲಿ ಮತ್ತೆ ಕಲಕಲವಾಗುವುದು.)

ಚಾಣಕ್ಯ—ಇದೇನು ಮತ್ತೆ? ಶಾರ್ಙ್ಗರವ, ನೋಡು ಹೋಗು.

(ಶಾರ್ಙ್ಗರವನು ಹೊರಗೆ ಹೋಗುವನು. ನೇಪಥ್ಯದಲ್ಲಿ ಸಾರುವ ಸದ್ದು:)

"ಎಚ್ಚರಿಕೆ. ಎಚ್ಚರಿಕೆ. ಈ ರಾಯಸದ ಶಕಟದಾಸನು ಅಮಾತ್ಯ ರಾಕ್ಷಸನ ಪ್ರೇರಣೆಗೆ ಒಳಗಾಗಿ, ಮಹಾಸ್ವಾಮಿಯವರ ಪ್ರಾಣಕ್ಕೆ ದ್ರೋಹಮಾಡಲು ತಂತ್ರಗಳನ್ನು ನಿತ್ಯವೂ ಹೂಡುತ್ತಿದ್ದ ಕಾರಣ, ಇವನ ಕುಟುಂಬವನ್ನು ಸೆರೆಯಲ್ಲಿಟ್ಟು ಇವನನ್ನು ಶೂಲಕ್ಕೆ ಏರಿಸಬೇಕೆಂದು ಚಂದ್ರಗುಪ್ತ ಮಹಾರಾಜರ ಅಪ್ಪಣೆ. ಹೋ!"

ಚಾಣಕ್ಯ—ತನ್ನ ಕರ್ಮದ ಫಲವನ್ನು ಅನುಭವಿಸಲಿ. (ಚಂದನದಾಸನ ಕಡೆಗೆ ತಿರುಗಿ) ರಾಜನು ಹೀಗೆ ತೀಕ್ಷ್ಣಶಿಕ್ಷೆಯನ್ನು ರಾಜದ್ರೋಹಿಗಳಿಗೆ ವಿಧಿಸುತ್ತಾನೆ. ರಾಕ್ಷಸನ ಕುಟುಂಬವನ್ನು ನೀನು ಮರೆಮಾಚಿರುವುದನ್ನು ಅವನು ಮನ್ನಿಸತಕ್ಕವನಲ್ಲ. ಆದ್ದರಿಂದ ಅನ್ಯಕಳತ್ರವನ್ನೊಪ್ಪಿಸಿ, ನಿನ್ನ ಕಳತ್ರವನ್ನೂ ಪ್ರಾಣವನ್ನೂ ಉಳಿಸಿಕೋ.

ಚಂದನದಾಸ—ಪೂಜ್ಯರೆ, ನನಗೇಕೆ ಬೆದರಿಕೆ ತೋರಿಸುತ್ತೀರಿ? ಅಮಾತ್ಯ ರಾಕ್ಷಸನ ಕುಟುಂಬ ನನ್ನ ಮನೆಯಲ್ಲಿ ಇದ್ದರೂ ನಾನು ಒಪ್ಪಿಸತಕ್ಕವನಲ್ಲ; ಇಲ್ಲದಿರುವಾಗ ಮತ್ತೇನು?

ಚಾಣಕ್ಯ—ಚಂದನದಾಸ, ಇದೇ ನಿನ್ನ ನಿಶ್ಚಯವೋ ?

ಚಂದನದಾಸ—ಇದೇ ನನ್ನ ನಿಶ್ಚಯ, ಸಂದೇಹವಿಲ್ಲದೆ.

ಚಾಣಕ್ಯ—(ತನ್ನಲ್ಲಿ) ಭಲಾ ಚಂದನದಾಸ! ಹೆರರ ಸೊತ್ತನ್ನು ಒಪ್ಪಿಸಿದರೆ ಇಷ್ಟು ಸುಲಭವಾಗಿ ಸಂಪತ್ತು ದೊರೆಯುವಾಗ, ಶಿಬಿಯಲ್ಲದೆ ಬೇರೆ ಯಾರು ಇಂಥ ಕಷ್ಟಕ್ಕೆ ತಲೆಯೊಡ್ಡುತ್ತಿದ್ದರು! (ಪ್ರಕಾಶವಾಗಿ) ಚಂದನದಾಸ, ಇದೇ ನಿನ್ನ ನಿಶ್ಚಯವೋ ?

ಚಂದನದಾಸ—ಸತ್ಯವಾಗಿ.

(ಈ ನಡುವೆ ಶಾರ್ಙ್ಗರವನು ಪ್ರವೇಶಿಸುವನು.)

ಚಾಣಕ್ಯ—(ಕೋಪವನ್ನು ನಟಿಸಿ) ಎಲಾ ದುರುಳ ವರ್ತಕ, ಹಾಗಾದರೆ ರಾಜಾಗ್ರಹವನ್ನು ಅನುಭವಿಸು.

ಚಂದನದಾಸ—ಸಿದ್ಧವಾಗಿದ್ದೇನೆ. ತಮ್ಮ ಅಧಿಕಾರಕ್ಕೆ ಅನುಗುಣವಾಗಿ ವಿಧಿಸಬಹುದು.

ಚಾಣಕ್ಯ—ಶಾರ್ಙ್ಗರವ, ದಂಡಪಾಶಿಕನಿಗೆ ನಾನು ಹೇಳಿದೆನೆಂದು ತಿಳಿಸು: ಈ ದುಷ್ಟ ವರ್ತಕನನ್ನು ಶೀಘ್ರವಾಗಿ ನಿಗ್ರಹಿಸಲಿ. . . . ಅಲ್ಲ, ತಾಳು. ದುರ್ಗರಕ್ಷಕನಾದ ವಿಜಯಪಾಲಕನಿಗೆ ಹೇಳು: ಇವನ ಸರ್ವೈಶ್ವರ್ಯವನ್ನೂ ಮುಟ್ಟುಗೋಲು ತೆಗೆದುಕೊಂಡು, ಹೆಂಡಿರುಮಕ್ಕಳೊಡನೆ ಬಂಧಿಸಿ ಸೆರೆಗೆ ತಳ್ಳಲಿ. ಅಷ್ಟರಲ್ಲಿ ಈ ವೃತ್ತಾಂತವನ್ನು ಚಂದ್ರಗುಪ್ತನಿಗೆ ತಿಳಿಸುತ್ತೇನೆ. ಅವನೇ ಪ್ರಾಣಾಂತ ಶಿಕ್ಷೆಯನ್ನು ಇವನಿಗೆ ವಿಧಿಸುತ್ತಾನೆ.

ಶಾರ್ಙ್ಗರವ—ಉಪಾಧ್ಯಾಯರ ಅಪ್ಪಣೆ. ಹೀಗೆ ಬಾ, ಸೆಟ್ಟಿ.

ಚಂದನದಾಸ—ಆಯ್ಯಾ, ಇಗೋ ಬಂದೆ. (ಹೋಗುತ್ತಾ, ತನ್ನಲ್ಲಿ) ಮಿತ್ರಕಾರ್ಯಕ್ಕಾಗಿ ವಿನಾಶವೇ ಹೊರತು ನನ್ನ ದುಷ್ಕಾರ್ಯಕ್ಕಾಗಿ ಅಲ್ಲದಿರುವುದು ನನ್ನ ಭಾಗ್ಯ. (ಶಾರ್ಙ್ಗರವನೊಡನೆ ಹೊರಟುಹೋಗುವನು.)

ಚಾಣಕ್ಯ—(ಹರ್ಷದಿಂದ) ಇನ್ನು ರಾಕ್ಷಸನು ಕೈಗೆ ಸಿಕ್ಕಿದನು: ಅವನ ಆಪತ್ತಿನಲ್ಲಿ ಈತನು ತನ್ನ ಪ್ರಾಣವನ್ನು ತೊರೆಯುವುದಕ್ಕೂ ಹೀಗೆ ಸಿದ್ಧವಾಗಿರುವಾಗ, ಈತನ ಆಪತ್ತಿನಲ್ಲಿ ಅವನೂ ತನ್ನ ಪ್ರಾಣವನ್ನು ಹಾಗೆಯೇ ಕಡೆಗಣಿಸುವುದು ಸಿದ್ಧ.

(ಚಾರನೊಬ್ಬನು ಪ್ರವೇಶಿಸುವನು.)

ಚಾರ—ಪೂಜ್ಯರಿಗೆ ಜಯವಾಗಲಿ.

ಚಾಣಕ್ಯ—ಏನು ?

ಚಾರ—ಶಕಟದಾಸನನ್ನು ಶೂಲಕ್ಕೇರಿಸುವ ಸಮಯದಲ್ಲಿ ಯಾರೋ ಕತ್ತಿಯನ್ನು ಝಳಪಿಸುತ್ತಾ ಬಂದು ಕೊಲೆಗಾರರನ್ನು ಬೆದರಿಸಿ ಅವನನ್ನು ಬಿಡಿಸಿಕೊಂಡು ಹೋದನು.

ಚಾಣಕ್ಯ—(ತನ್ನಲ್ಲಿ) ಭಲಾ ಸಿದ್ಧಾರ್ಥಕ! ಕಾರ್ಯ ಮೊದಲಾಯಿತು. (ಪ್ರಕಾಶವಾಗಿ ಕೋಪವನ್ನು ನಟಿಸಿ) ಏನು, ಬಲಾತ್ಕಾರದಿಂದ ಬಿಡಿಸಿಕೊಂಡು ಹೋದನೆ? ಎಲಾ, ನೀನು ಹೋಗು. ಇದಕ್ಕೆ ತಕ್ಕದ್ದನ್ನು ಮಾಡುತ್ತೇವೆ.

ಚಾರ—ಅಪ್ಪಣೆ (ಹೋಗುವನು.)

(ಉದ್ದಾಲಕನು ಹೊರಗಿನಿಂದ ಬರುವನು.)

ಉದ್ದಾಲಕ—ಶಕಟದಾಸನನ್ನು ಯಾರೋ ಬಿಡಿಸಿಕೊಂಡು ಹೋದರು, ಉಪಾಧ್ಯಾಯರೆ.

ಚಾಣಕ್ಯ—ನಿನಗೆ ಯಾರೋ ಹೇಳಿದವರು ?

ಉದ್ದಾಲಕ—ನಾನೇ ನೋಡಿಕೊಂಡು ಬಂದೆ.

ಚಾಣಕ್ಯ—ಅಲ್ಲಿಗೆ ಹೋಗಿದ್ದೆಯಾ ? . . . (ಮನಸ್ಸಿಗೆ ಹತ್ತಿಸಿಕೊಂಡವನಂತೆ) ಏನು ಅಚಾತುರ್ಯ! ಉದ್ದಾಲಕ, ಹೋಗಿ ಕೂಡಲೆ ಭಾಗುರಾಯಣನಿಗೆ ಹೇಳು. ಬೆನ್ನಟ್ಟಿ ಹೋಗಿ ಅವರಿಬ್ಬರನ್ನೂ ಹಿಡಿತರಲಿ.

ಉದ್ದಾಲಕ—(ಬೆರಗಾಗಿ) ಏನು ಉಪಾಧ್ಯಾಯರೆ, ಹೀಗೆ ಮಾತಾಡುತ್ತಿದ್ದೀರಿ? ಪರ್ವತೇಶ್ವರನ ಮಗನ ಜೊತೆಯಲ್ಲಿಯೇ ಭಾಗುರಾಯಣನು ಇಲ್ಲಿಂದ ತಪ್ಪಿಸಿಕೊಂಡು ಹೋದನಂತೆ.

ಚಾಣಕ್ಯ—(ಒಪ್ಪಿಕೊಂಡವನಂತೆ) ನಿಜ, ಮರೆತುಹೋಯಿತು. ಭದ್ರಭಟ ಮೊದಲಾದ ಸೇನಾಪತಿಗಳಿಗೆ ನಾನು ಅಪ್ಪಣೆಮಾಡಿದೆ ಎಂದು ಹೇಳು: ಆ ದ್ರೋಹಿ ಭಾಗುರಾಯಣನನ್ನು ಹಿಡಿತರಲಿ.

ಉದ್ದಾಲಕ—ಚೆನ್ನಾಯಿತು, ಚೆನ್ನಾಯಿತು. ನಿಮ್ಮ ತಂತ್ರವೆಲ್ಲಾ ಕೆಟ್ಟು ಹೋಗಿದೆ, ಉಪಾಧ್ಯಾಯರೆ!

ಚಾಣಕ್ಯ—ಇದೇಕೋ ಹೀಗೆ ಹೇಳುತ್ತೀಯೆ ?

ಉದ್ದಾಲಕ—ಇನ್ನೇನು ಮಾಡಲಿ ? ಭದ್ರಭಟ ಮೊದಲಾದವರೂ ಈ ಊರಿನಿಂದ ಓಡಿಹೋಗಿದ್ದಾರಂತೆ. ಬೆಳಗ್ಗೆ ನದೀತೀರದಲ್ಲಿ ಜನ ಮಾತಾಡಿಕೊಳ್ಳುತ್ತಿದ್ದರು. ನಾನು ನಿಮಗೆ ಹೇಳಬೇಕೆಂದು ಬಂದೆ ; ಅಷ್ಟರಲ್ಲೇ ನನ್ನನ್ನು ನೀವು ಮತ್ತೆ ಕಳುಹಿಸಿಕೊಟ್ಟಿರಿ.

ಚಾಣಕ್ಯ—ನೀನಾದರೂ ಇರುವುದರಿಂದ ನನಗೆ ವರ್ತಮಾನ ಮುಟ್ಟುತ್ತಾ ಇದೆ.

ಉದ್ದಾಲಕ—ಉಪಾಧ್ಯಾಯರೆ, ನನಗೆ ಒಂದು ಯೋಚನೆ ಹತ್ತಿದೆ. ಶತ್ರುಗಳು ಪಟ್ಟಣವನ್ನು ಮುತ್ತಿದರೆ ಏನು ಮಾಡುವುದು ?

ಚಾಣಕ್ಯ—ನಾನಿರುವಾಗ ನಿನಗೇಕೆ ಯೋಚನೆ ?

ಉದ್ದಾಲಕ—ಹಾಗಲ್ಲ; ಶತ್ರುಗಳ ಕೈಗೆ ಸಿಕ್ಕದ ಹಾಗೆ ನೀವು ತಪ್ಪಿಸಿಕೊಂಡು ಬಿಡುತ್ತೀರಿ. . . . ಊರಿಗೆ ಕಾವಲಾಗಿದ್ದವರೆಲ್ಲರೂ ಓಡಿಹೋಗಿದ್ದಾರೆ. ನಮ್ಮ ಗತಿ ಏನು ?

ಚಾಣಕ್ಯ—ನಿನಗೇಕೆ ಆ ಚಿಂತೆ ? ನೋಡು : ಮನಸ್ಸಿನಲ್ಲಿ ಉದ್ದೇಶಗಳನ್ನಿಟ್ಟುಕೊಂಡು ಯಾರು ಯಾರು ಹೋದರೋ ಅವರಂತೂ ಹೊರಟೇ ಹೋದರು. ಯಾರು ಇನ್ನೂ ನಿಂತಿದ್ದಾರೋ ಅವರೂ ಇಷ್ಟ ಬಂದ ಹಾಗೆ ಹೋಗಲಿ. ಆದರೆ ಕಾರ್ಯಸಾಧನೆಯಲ್ಲಿ ನೂರು ಸೇನೆಗಳನ್ನು ಮೀರಿಸಿ, ನಂದರನ್ನು ನಿರ್ಮೂಲಮಾಡಿದ ಈ ನನ್ನ ಬುದ್ಧಿ ಒಂದು ಮಾತ್ರ ಹೋಗದಿರಲಿ ! . . . ನಡೆ, ಆಹ್ನಿಕಕ್ಕೆ ಸಿದ್ಧಪಡಿಸು.

(ಶಿಷ್ಯನು ಹೋಗುವನು.)

ಚಾಣಕ್ಯ—ರಾಕ್ಷಸ, ರಾಕ್ಷಸ ! ನೀನು ಇನ್ನೆಲ್ಲಿ ಹೋಗುವೆ ? ಕಾಡಾನೆಯನ್ನು ಹಗ್ಗದಿಂದ ಕಟ್ಟುವಂತೆ ನನ್ನ ಬುದ್ಧಿಯಿಂದ ನಿನ್ನನ್ನು ಬಂಧಿಸಿ ಚಂದ್ರಗುಪ್ತನ ಸೇವೆಯಲ್ಲಿ ನಿಲ್ಲಿಸದೆ ಹೋದೇನೇ ?

ತೆರೆ.

# ಎರಡನೆಯ ಅಂಕ

(ಮಲಯಕೇತುವಿನ ರಾಜಧಾನಿ: ಅಮಾತ್ಯ ರಾಕ್ಷಸನ ಭವನದಲ್ಲಿ ಒಂದು ಕೋಣೆ. ರಾಕ್ಷಸನು ಒಂದು ಪೀಠದ ಮೇಲೆ ಕುಳಿತು ಚಿಂತಿಸುತ್ತಿರುವನು.)

ರಾಕ್ಷಸ—ರಾಜ್ಯಲಕ್ಷ್ಮೀ, ನಿನಗೆ ಗುಣದ ಮೇಲೆ ಕಣ್ಣೇ ಇಲ್ಲವೆ? ನಂದ ಮಹಾರಾಜನಲ್ಲಿ ಅಷ್ಟೊಂದು ಆನಂದದಿಂದ ವಿಹರಿಸುತ್ತಿದ್ದ ನಿನಗೆ ಮೌರ್ಯಪುತ್ರನ ಸಹವಾಸದಲ್ಲಿ ಹೇಗೆ ಆಸಕ್ತಿ ಹುಟ್ಟಿತು? ನಂದ ರೊಡನೆಯೇ ನೀನೂ ಲಯಿಸಿಹೋಗಿದ್ದರೆ ಉಚಿತವಾಗುತ್ತಿತ್ತು. ಚಪಲೆ, ಚಂಚಲೆ! ಇರಲಿ, ನೀನು ಈಗ ಆಶ್ರಯಿಸಿರುವವನನ್ನು ಮೂಲೋತ್ಪಾಟನ ಮಾಡಿ ನಿನ್ನ ಚಾಪಲ್ಯಕ್ಕೆ ಘೋರ ಶಿಕ್ಷೆಯನ್ನು ವಿಧಿಸದಿದ್ದರೆ ನಾನು ಅಮಾತ್ಯ ರಾಕ್ಷಸನೆ? (ಹಾಗೆಯೇ ದಿಟ್ಟಿಸುತ್ತಾ, ಥಟ್ಟನೆ ಎಚ್ಚರಗೊಂಡು) ಅಯ್ಯೋ ಇದೇನು ಹುಚ್ಚು ನನಗೆ! . . . ನನ್ನ ಪ್ರಭುಗಳು ಸ್ವರ್ಗದಲ್ಲಾದರೂ ಸಂತೋಷಪಡುವಂತೆ ಉಪಾಯಗಳನ್ನು ಹೂಡುವ ಬದಲು ಹೀಗೆ ಕನವರಿಸುತ್ತ ಕುಳಿತೆ ನಲ್ಲ! ಕುಸುಮಪುರದಲ್ಲಿ ಏನೇನು ನಡೆಯುತ್ತಿದೆಯೋ? . . . ನಾನು ಇಲ್ಲಿಗೆ ಬರುವಾಗ ನನ್ನ ಕುಟುಂಬವನ್ನು ಚಂದನದಾಸನ ವಶದಲ್ಲಿ ಬಿಟ್ಟು ಬಂದದ್ದೇ ಒಳ್ಳೆಯದಾಯಿತು. ಅಲ್ಲಿರತಕ್ಕ ಸ್ವಾಮಿ ಭಕ್ತರಿಗೆ ಇದರಿಂದ ನನ್ನಲ್ಲಿ ನಂಬಿಕೆ ಹೆಚ್ಚಿರಬೇಕು. ಶಕಟದಾಸನೂ ಜೀವಸಿದ್ಧಿಯೂ ಅಲ್ಲಿ ನಿಂತು ಕೆಲಸಮಾಡುತ್ತಿರುವಾಗ, ನನ್ನ ಬುದ್ಧಿ ಬಾಣದಿಂದ ಆ ಮೌರ್ಯನ ಪ್ರಾಣವನ್ನು ಭೇದಿಸಲಾರೆನೆ? ದೈವ ವೊಂದು ಮಾತ್ರ ಅದೃಶ್ಯಕವಚವಾಗಿ ಅವನನ್ನು ರಕ್ಷಿಸದಿದ್ದರೆ . . .

(ಚಾರ ಪ್ರಿಯಂವದಕನು ಪ್ರವೇಶಿಸುವನು.)

ಚಾರ—ಅಮಾತ್ಯರಿಗೆ ಜಯವಾಗಲಿ. ಮಲಯಕೇತುಕುಮಾರನ ಬಳಿ ಯಿಂದ ಕಂಚುಕಿಗಳು ಬಂದಿದ್ದಾರೆ.

ರಾಕ್ಷಸ—(ಎಚ್ಚತ್ತು) ಕುಮಾರನು ಕಳುಹಿಸಿದ್ದಾನೆಯೆ? ಒಳಕ್ಕೆ ಬರಲಿ.

(ಚಾರನು ಹೋಗಿ ಕಂಚುಕಿಯನ್ನು ಕರೆತರುವನು.)

ಕಂಚುಕಿ—ಅಮಾತ್ಯರಿಗೆ ಶುಭವಾಗಲಿ.

ರಾಕ್ಷಸ—ಆರ್ಯ, ನಮಸ್ಕಾರ. ಪ್ರಿಯಂವದಕ, ಇವರಿಗೆ ಪೀಠವನ್ನು ಸಿದ್ಧಪಡಿಸು.

ಚಾರ—(ಸಿದ್ಧಪಡಿಸಿ, ಕಂಚುಕಿಗೆ) ಈ ಪೀಠದಲ್ಲಿ ಕುಳಿತುಕೊಳ್ಳಬೇಕು.

ಕಂಚುಕಿ—(ಕುಳಿತು) ಅಮಾತ್ಯರೆ, ಕುಮಾರ ಮಲಯಕೇತು ತಮಗೆ ಈ ರೀತಿ ವಿಜ್ಞಾಪಿಸುತ್ತಾನೆ: "ಬಹಳ ದಿನಗಳಿಂದಲೂ ಆರ್ಯನು ಉಚಿತವಾದ ಅಲಂಕಾರವನ್ನೇ ಬಿಟ್ಟಿರುವುದರಿಂದ ನನ್ನ ಮನಸ್ಸಿಗೆ ಬಹಳ ವ್ಯಥೆಯಾಗಿದೆ. ದಿವಂಗತರಾದ ಪ್ರಭುಗಳ ಗುಣಗಳನ್ನು ಥಟ್ಟನೆ ಮರೆಯುವುದು ಅಶಕ್ಯವಾದರೂ ಆರ್ಯನು ನನ್ನ ವಿಜ್ಞಾಪನೆಯನ್ನು ಮನ್ನಿಸಬೇಕು."—ಹೀಗೆ ಹೇಳಿ ಈ ಆಭರಣಗಳನ್ನು (ತೋರಿಸುತ್ತಾ) ತನ್ನ ಮೈಮೇಲಿನಿಂದ ತೆಗೆದು ತಮಗೆ ಕಳುಹಿಸಿದ್ದಾನೆ. ಅಮಾತ್ಯರು ದಯವಿಟ್ಟು ಧರಿಸಬೇಕು.

ರಾಕ್ಷಸ—ಆರ್ಯ ಜಾಜಲಿ, ನಾನು ಹೀಗೆ ವಿಜ್ಞಾಪಿಸಿದೆನೆಂದು ಕುಮಾರನಿಗೆ ತಿಳಿಸು: "ನಿನ್ನ ಗುಣದ ಪರಿಚಯದಿಂದ ನನ್ನ ಪ್ರಭುಗಳ ಗುಣಗಳೂ ಮರೆತುಹೋದುವು. ಆದರೆ, ಪರಾಜಯದಿಂದ ದೀನವಾಗಿ ನಿರ್ವೀರ್ಯವಾಗಿರುವ ಈ ದೇಹದ ಮೇಲೆ ಈ ಸುಂದರವಾದ ಆಭರಣಗಳನ್ನು ಏನೆಂದು ಹೇರಿಕೊಳ್ಳಲಿ! ಶತ್ರುಮಂಡಲವನ್ನು ನಿಶ್ಶೇಷವಾಗಿ ಛೇದಿಸಿ, ಕುಸುಮಪುರದ ಸುಗಾಂಗ ಪ್ರಾಸಾದದಲ್ಲಿ ನಿನ್ನ ಸ್ವರ್ಣಸಿಂಹಾಸನವನ್ನು ಸ್ಥಾಪಿಸಿದ ಬಳಿಕ ಮಾತ್ರ ನನಗೆ ಅಲಂಕಾರದ ಚಿಂತೆ." ಈ ಮಾತನ್ನು ಕುಮಾರನಿಗೆ ಬಿನ್ನೈಸು.

ಕಂಚುಕಿ—ಅಮಾತ್ಯರು ಮಾರ್ಗದರ್ಶಿಗಳಾಗಿರುವಾಗ ಇದೆಲ್ಲ ಕುಮಾರನಿಗೆ ಲಭಿಸುವುದು ಯಾವ ದೊಡ್ಡ ಮಾತು! ಆದ್ದರಿಂದ ಕುಮಾರನ ಈ ಪ್ರಥಮ ಯಾಚನೆಯನ್ನು ತಾವು ಗೌರವಿಸಬೇಕು.

ರಾಕ್ಷಸ—ಆರ್ಯ, ಕುಮಾರನ ವಚನದಂತೆಯೇ ನಿನ್ನ ವಚನವೂ ಮೀರತಕ್ಕದ್ದಲ್ಲ. ಇಗೋ ಕುಮಾರನ ಅಪ್ಪಣೆಯನ್ನು ಪಾಲಿಸುತ್ತೇನೆ.

ಕಂಚುಕಿ—(ಆಭರಣಗಳನ್ನು ತೊಡಿಸಿ) ಅಮಾತ್ಯರಿಗೆ ಶುಭವಾಗಲಿ, ನಾನಿನ್ನು ಬರಬಹುದೆ?

ರಾಕ್ಷಸ—ನಮಸ್ಕಾರ.

(ಕಂಚುಕಿ ಹೋಗುವನು.)

ರಾಕ್ಷಸ—ಪ್ರಿಯಂವದಕ, ನನ್ನನ್ನು ಕಾಣುವುದಕ್ಕೆ ಯಾರಾದರೂ ಬಾಗಿಲಲ್ಲಿ ಕಾದಿದ್ದಾರೆಯೆ?

ಚಾರ—ಒಬ್ಬ ಹಾವಾಡಿಗನು ಮಾತ್ರ ಇದ್ದಾನೆ. ತಮ್ಮೆದುರಿಗೆ ಅವನು ಹಾವುಗಳನ್ನು ಆಡಿಸಬೇಕಂತೆ.

ರಾಕ್ಷಸ—(ತನ್ನಲ್ಲಿ) ಹಾವಾಡಿಗನೆ? ಇದೇನು, ಮೊಟ್ಟಮೊದಲೇ ಸರ್ಪದರ್ಶನ! (ಪ್ರಕಾಶವಾಗಿ) ಪ್ರಿಯಂವದಕ, ನನಗೆ ಸರ್ಪಗಳಲ್ಲಿ ಕುತೂಹಲವಿಲ್ಲ. ಅವನಿಗೆ ಏನನ್ನಾದರೂ ಕೊಟ್ಟು ಕಳುಹಿಸಿಬಿಡು.

ಚಾರ—ಅಪ್ಪಣೆ. (ಹೋಗುತ್ತಾ, ತನ್ನಲ್ಲಿ) ಹಾಗೇ ಆಗಬೇಕು! "ಹಾವನ್ನು ಆಡಿಸಯ್ಯ, ನಾನು ನೋಡಬೇಕು" ಎಂದು ಆಗ ಕೇಳಿದ್ದಕ್ಕೆ, "ರಾಜಕುಲದ ಸೇವೆಯಲ್ಲಿರುವ ನಿನಗೆ ಬೇರೆಯ ಹಾವಿನ ಸಂಗಡ ಏತಕ್ಕೆ ಆಟ?" ಎಂದು ಹಾಸ್ಯಮಾಡಿದ ಆ ಹಾವಾಡಿಗ.

(ರಾಕ್ಷಸನು ಯೋಚಿಸುತ್ತಾ ಕುಳಿತಿರುವನು. ಚಾರನು ಮತ್ತೆ ಬರುವನು.)

ರಾಕ್ಷಸ—ಮತ್ತೇನು?

ಚಾರ—ಆ ಹಾವಾಡಿಗನು ಸ್ವಲ್ಪಕ್ಕೆ ಬಿಡುವವನಲ್ಲ. "ನಾನು ಹಾವಾಡಿಗ ಮಾತ್ರವೇ ಅಲ್ಲ; ನನಗೆ ಹಾಡುಕಟ್ಟುವುದಕ್ಕೂ ಬರುತ್ತದೆ. ಅಮಾತ್ಯರು ದರ್ಶನಕೊಡುವುದಕ್ಕೆ ಒಪ್ಪದಿದ್ದರೆ ಅವರಿಗೆ ಈ ಕವಿತ್ವವನ್ನು ತೋರಿಸು" ಎಂದು ಹೇಳಿ ಈ ಪತ್ರವನ್ನು ಕೊಟ್ಟಿದ್ದಾನೆ. (ಪತ್ರವನ್ನು ರಾಕ್ಷಸನಿಗೆ ಒಪ್ಪಿಸುವನು.)

ರಾಕ್ಷಸ—(ಓದಿಕೊಳ್ಳುವನು.)

"ತನ್ನ ಕೌಶಲದಿಂದ ಕುಸುಮಸಾರವನೆಲ್ಲ
ಚೆನ್ನಾಗಿ ಹೀರುವುದು ದುಂಬಿ;

ಚೆನ್ನಾಗಿ ಹೀರಿ ಮುಗುಚಿ ಕಾರುವುದದ-
ನಿನ್ನೊಬ್ಬರುಣುವ ಸಲುವಾಗಿ."

(ತನ್ನಲ್ಲಿ) ಓಹೋ! ಕುಸುಮಪುರದ ವೃತ್ತಾಂತವನ್ನು ತಿಳಿದುಕೊಂಡು ನಿಮಗೆ ಅರಿಕೆ ಮಾಡಲು ಬಂದಿದ್ದೇನೆ—ಎಂದು ಇದರ ಅರ್ಥ. ಯಾರು ಈ ಗೂಢಚಾರ?—ಹಾವಾಡಿಗನ ವೇಷ ಹಾಕಿದ್ದಾನೆ. (ಚಿಂತಿಸಿ) ವಿರಾಧಗುಪ್ತನಾಗಿರಬೇಕು. (ಪ್ರಕಾಶವಾಗಿ) ಪ್ರಿಯಂವದಕ, ಇವನನ್ನು ಒಳಕ್ಕೆ ಬಿಡು. ಚೆನ್ನಾಗಿ ಕವಿತ್ವ ಮಾಡುತ್ತಾನೆ; ಇವನ ಸುಭಾಷಿತಗಳನ್ನು ಕೇಳಬೇಕು ಎನ್ನಿಸಿದೆ.

ಚಾರ—(ಸ್ವಲ್ಪ ಸಪ್ಪೆಮುಖದಿಂದ) ಅಪ್ಪಣೆ. (ಹೋಗಿ ಹಾವಾಡಿಗನ ವೇಷದ ವಿರಾಧಗುಪ್ತನನ್ನು ಕರೆತರುವನು.)

ವಿರಾಧಗುಪ್ತ—(ಹತ್ತಿರ ಬಂದು) ಅಮಾತ್ಯರಿಗೆ ಜಯವಾಗಲಿ.

ರಾಕ್ಷಸ—(ನೋಡಿ) ವಿರಾಧ-(ಅರ್ಧೋಕ್ತಿಯಲ್ಲಿ ನಿಲ್ಲಿಸಿ) ಪ್ರಿಯಂವದಕ, ಈತನು ಹಾವಾಡಿಸುವುದನ್ನು ನಾನು ನೋಡಬೇಕು. (ಚಾರನು ಸ್ವಲ್ಪ ಬೆರಗಾಗುವನು.) ಯಾರನ್ನೂ ಒಳಕ್ಕೆ ಬಿಡಬೇಡ. ನೀನೂ ನಿನ್ನ ಕರ್ತವ್ಯವನ್ನು ನೋಡಿಕೊಳ್ಳುತ್ತಿರು.

ಪ್ರಿಯಂವದಕ—ಅಪ್ಪಣೆ. (ಹೊರಟುಹೋಗುವನು.)

ರಾಕ್ಷಸ—ಮಿತ್ರ ವಿರಾಧಗುಪ್ತ, ಈ ಪೀಠದ ಮೇಲೆ ಕುಳಿತುಕೊ. (ವಿರಾಧಗುಪ್ತನು ಕುಳಿತುಕೊಳ್ಳುವನು. ಅವನ ವೇಷವನ್ನು ದಿಟ್ಟಿಸಿ ನೋಡುತ್ತಾ) ಅಯ್ಯೋ, ಸ್ವಾಮಿಭಕ್ತರ ಅವಸ್ಥೆ ಇಲ್ಲಿಗೆ ಇಳಿಯಿತೆ? (ದುಃಖಿಸುವನು.)

ವಿರಾಧಗುಪ್ತ—ಅಮಾತ್ಯರೆ, ಇದಕ್ಕೇಕೆ ದುಃಖ? ಇನ್ನು ಸ್ವಲ್ಪ ದಿನಗಳಲ್ಲಿ ನೀವು ನಮಗೆಲ್ಲಾ ಪೂರ್ವದ ವೈಭವವನ್ನು ಸಾಧಿಸಿಯೇ ಕೊಡುತ್ತೀರಿ.

ರಾಕ್ಷಸ—ನಿಮ್ಮನ್ನು ಹೀಗೆ ಕ್ಲೇಶಪಡಿಸುವುದೊಂದೇ ನಾನು ಈಗ ಸಾಧಿಸುತ್ತಿರುವ ಕೆಲಸ.

ವಿರಾಧಗುಪ್ತ—ನೀವು ಮಾತ್ರ ಸ್ವಾಮಿಭಕ್ತಿಯನ್ನು ಮರೆತು ಸುಖಲೋಲುಪರಾಗಿ ಕುಳಿತಿದ್ದೀರಾ? ಹೆಂಡತಿ ಮಕ್ಕಳನ್ನು ಬಿಟ್ಟು ಪರರಾಜರ

ಮನಸ್ಸನ್ನು ಅನುಸರಿಸಿಕೊಂಡು ಹಗಲಿರುಳೂ ಚಿಂತಾಮಗ್ನರಾಗಿ ಕ್ಲೇಶಪಡುತ್ತಿಲ್ಲವೆ ?

ರಾಕ್ಷಸ—ಅಂಥ ಸ್ವಾಮಿಯನ್ನು ಕಳೆದುಕೊಂಡ ಮೇಲೆ ಪಡುವ ಈ ಕ್ಲೇಶವೆಲ್ಲಾ ಗೋಡೆಯಿಲ್ಲದೆ ಚಿತ್ರ ಬರೆದಂತೆ. . . . ಆ ಮಾತು ಹಾಗಿರಲಿ, ಕುಸುಮಪುರದ ವೃತ್ತಾಂತವೇನು ? ಹೇಳು. ಚಂದ್ರ ಗುಪ್ತನ ವಧೆ ಕೈಗೂಡಿತೆ ? ತನ್ನ ಶತ್ರು ನರಕಕ್ಕೆ ಹೋದನೆಂದು ನಂದಮಹಾರಾಜನಿಗೆ ಸ್ವರ್ಗದಲ್ಲಾದರೂ ಸಮಾಧಾನವಾದರೆ ಅಷ್ಟೇ ನಮ್ಮ ಸೇವೆ.

ವಿರಾಧಗುಪ್ತ—ಅಮಾತ್ಯರೆ, ಚಂದ್ರಗುಪ್ತನ ವಧೆಯೆಲ್ಲಿ ಬಂತು ? ನಮ್ಮ ತಂತ್ರವೆಲ್ಲಾ ನಮ್ಮವರಿಗೇ ಮೃತ್ಯುವಾಯಿತು.

ರಾಕ್ಷಸ—ಏನು, ನಮ್ಮವರಿಗೇ ಮೃತ್ಯುವಾಯಿತೆ ? ಈ ಕಿವಿಗಳಲ್ಲಿ ಏನೇನನ್ನು ಕೇಳಬೇಕೋ ! . . . ಮೊದಲಿನಿಂದ ಹೇಳಿಬಿಡು. ಎಲ್ಲಿ, ವೈದ್ಯ ಅಭಯದತ್ತನು ಏನು ಮಾಡಿದನು ?

ವಿರಾಧಗುಪ್ತ—ಎಲ್ಲವನ್ನೂ ಮಾಡಿದನು.

ರಾಕ್ಷಸ—ಹಾಗಾದರೆ ಚಂದ್ರಗುಪ್ತನು ಏಕೆ ಸಾಯಲಿಲ್ಲ ?

ವಿರಾಧಗುಪ್ತ—ದೈವಯೋಗದಿಂದ ಸಾಯಲಿಲ್ಲ.

ರಾಕ್ಷಸ—ಎಲ್ಲವನ್ನೂ ಮಾಡಿದನೆಂದು ಹೇಳಿದೆ, ಮತ್ತೆ ?

ವಿರಾಧಗುಪ್ತ—ಅಮಾತ್ಯರೇ, ಆ ವೈದ್ಯನು ಯೋಗಚೂರ್ಣವನ್ನು ಬೆರಸಿ ಚಂದ್ರಗುಪ್ತನಿಗೆ ಔಷಧಿ ಮಾಡಿಕೊಟ್ಟನು. ಆದರೆ ಚಾಣಕ್ಯ ಹತಕನು ಅದನ್ನು ಚಿನ್ನದ ಬಟ್ಟಲಿಗೆ ಹಾಕಿಸಿ ಪರೀಕ್ಷಿಸಿ ಅದು ಬಣ್ಣಗೆಟ್ಟದ್ದನ್ನು ಕಂಡು, "ಈ ಔಷಧಿಯಲ್ಲಿ ವಿಷವಿದೆ, ನೀನು ಕುಡಿಯಬೇಡ" ಎಂದು ಚಂದ್ರಗುಪ್ತನಿಗೆ ಹೇಳಿದನು.

ರಾಕ್ಷಸ—ಏನು ಧೂರ್ತ ಆ ಬ್ರಾಹ್ಮಣ ! ವೈದ್ಯನ ಗತಿ ?

ವಿರಾಧಗುಪ್ತ—ಅದೇ ಔಷಧಿಯನ್ನು ಅವನಿಗೆ ಕುಡಿಸಿದರು; ಸತ್ತುಹೋದನು.

ರಾಕ್ಷಸ—ಅಯ್ಯೋ, ವೈದ್ಯವಿಜ್ಞಾನದ ನಿಧಿಯೇ ನಾಶವಾಯಿತು ! . .

ಚಂದ್ರಗುಪ್ತನ ಶಯ್ಯಾಗೃಹವನ್ನು ನೋಡಿಕೊಳ್ಳಲು ನೇಮಿಸಿದ್ದ ಪ್ರಮೋದಕನ ಸಂಗತಿಯೇನು ?

ವಿರಾಧಗುಪ್ತ—ವೈದ್ಯನ ಸಂಗತಿಯೇ.

ರಾಕ್ಷಸ—(ಉದ್ವೇಗದಿಂದ) ಹೇಗೆ ?

ವಿರಾಧಗುಪ್ತ—ಆ ಮೂರ್ಖನಿಗೆ ಸ್ವಲ್ಪವೂ ವಿವೇಚನೆಯೇ ಇರಲಿಲ್ಲ. ನೀವು ಉದಾರವಾಗಿ ದಯಪಾಲಿಸಿದ ಹಣವನ್ನೆಲ್ಲಾ ದುಂದುವೆಚ್ಚಮಾಡಿ ಮೆರೆಯುವುದಕ್ಕೆ ಪ್ರಾರಂಭಿಸಿದನು. ಅವನ ಬಟ್ಟೆಬರೆಗಳೇನು, ಊಟ ಉಪಚಾರಗಳೇನು, ವಿಲಾಸ ವಿಹಾರಗಳೇನು ! ಚಾಣಕ್ಯನು ಇದನ್ನು ತಿಳಿದು, "ನಿನಗೆ ಕೊಡುವ ಸಂಬಳ ಸ್ವಲ್ಪ ; ಇಷ್ಟು ವೆಚ್ಚಕ್ಕೆ ಹಣ ಎಲ್ಲಿಂದ ಬಂತು ? " ಎಂದು ಕೇಳಿದಾಗ ತಪ್ಪುತಪ್ಪಾಗಿ ಉತ್ತರಕೊಟ್ಟು ಸಿಕ್ಕಿಕೊಂಡನು. ಸರಿ, ಚಾಣಕ್ಯನು ಅವನಿಗೆ ಚಿತ್ರವಧೆ ಮಾಡಿಸಿದನು.

ರಾಕ್ಷಸ—ಹಾ! ಇಲ್ಲಿಯೂ ದೈವದ ಕೈಯೇ ಮೇಲಾಯಿತು. . . . ಚಂದ್ರಗುಪ್ತನ ಶಯನಗೃಹದ ಗೋಡೆಯೊಳಗೆ ಸುರಂಗದಲ್ಲಿ ಮೊದಲೇ ವಾಸಮಾಡಿಕೊಂಡು ಅವನನ್ನು ಸಂಹರಿಸಲು ಕಾಯುತ್ತಿದ್ದ ಬೀಭತ್ಸಕಾದಿಗಳ ವೃತ್ತಾಂತವೇನು ?

ವಿರಾಧಗುಪ್ತ—ಅಮಾತ್ಯರೆ, ಬಲು ಘೋರ.

ರಾಕ್ಷಸ—ಬಲು ಘೋರ? ಅವರು ಅಲ್ಲಿ ಅಡಗಿದ್ದ ವಿಷಯವೂ ಆ ಪಾಪಿ ಚಾಣಕ್ಯನಿಗೆ ಗೊತ್ತಾಯಿತೊ ?

ವಿರಾಧಗುಪ್ತ—ಮತ್ತೇನು ? ಚಾಣಕ್ಯನು ಬಂದು ಪರೀಕ್ಷಿಸಿದ ಹೊರತು ಚಂದ್ರಗುಪ್ತನು ಉಡುವುದಿಲ್ಲ, ಊಟ ಮಾಡುವುದಿಲ್ಲ, ನಡೆಯುವುದಿಲ್ಲ, ಮಲಗುವುದಿಲ್ಲ. ಶಯನಗೃಹವನ್ನು ಚಾಣಕ್ಯನು ಪರೀಕ್ಷೆ ಮಾಡುತ್ತಿದ್ದಾಗ, ಗೋಡೆಯ ಬಿರುಕಿನಿಂದ ಅನ್ನದ ಅಗುಳನ್ನು ಕಚ್ಚಿಕೊಂಡು ಇರುವೆಗಳ ಸಾಲು ಹರಿದುಬರುತ್ತಿರುವುದು ಆ ದುರಾತ್ಮನ ಕಣ್ಣಿಗೆ ಬೀಳಬೇಕೆ? ಇಲ್ಲಿ ಯಾರೋ ಮನುಷ್ಯರು ಅಡಗಿದ್ದಾರೆಂದು ಊಹಿಸಿ ಆ ಶಯನಗೃಹಕ್ಕೇ ಬೆಂಕಿಯಿಡಿಸಿದನು.

ಅದು ಉರಿಯುವಾಗ ಹೊಗೆ ಸುತ್ತಿಕೊಂಡು, ಹೊರಗೆ ಬರಲು ಮಾಡಿಕೊಂಡಿದ್ದ ಮತ್ತೊಂದು ದಾರಿ ಕಾಣಿಸದೆ, ಸುರಂಗದಲ್ಲಿಯೇ ಬೀಭತ್ಸಕಾದಿಗಳು ಭಸ್ಮವಾಗಿ ಹೋದರು.

ರಾಕ್ಷಸ—(ಕಣ್ಣೀರು ತುಂಬಿ) ಏನು ಕಷ್ಟ ಬಂತು ! ವಿರಾಧಗುಪ್ತ, ಆ ಚಂದ್ರಗುಪ್ತ ಹತಕನಿಗಿರುವ ದೈವಸಹಾಯವನ್ನು ನೋಡು. ವಿಷದಿಂದಲೋ ಶಸ್ತ್ರದಿಂದಲೋ ಅವನನ್ನು ಕೊಲ್ಲುವುದಕ್ಕೆ ನಾನು ಕಳುಹಿಸಿದವರೆಲ್ಲರೂ ಅದೇ ಉಪಾಯದಿಂದ ತಾವೇ ಹತರಾದರು. ನಾನು ಪ್ರಯೋಗಿಸುತ್ತಿರುವ ಅಮೋಘ ತಂತ್ರಗಳೆಲ್ಲವೂ ಆ ಮೌರ್ಯನಿಗೇ ಫಲಿಸುತ್ತಿವೆಯಲ್ಲಾ ! ಕಡೆಗೆ ಅವನ ಕೊಲೆಗೆಂದು ನಾನು ಗೂಢವಾಗಿ ಕಳುಹಿಸಿದ ವಿಷಕನ್ಯೆ ಕೂಡ ಅವನಿಗೇ ಅರ್ಧರಾಜ್ಯವನ್ನು ಉಳಿಸಿ ಕೊಟ್ಟಳು. ಪರ್ವತೇಶ್ವರನು ಬದುಕಿದ್ದಿದ್ದರೆ ನನ್ನ ಭೇದೋಪಾಯವು ಫಲಿಸಿ ಎಷ್ಟೋ ದಿನವಾಗುತ್ತಿತ್ತು. ಈಗ ಈ ಹುಡುಗ ಮಲಯಕೇತುವನ್ನು ಕಟ್ಟಿಕೊಂಡು ಹೆಣಗಬೇಕಾಗಿದೆ.

ವಿರಾಧಗುಪ್ತ—ಅಮಾತ್ಯರೆ, ಏನೇ ಆಗಲಿ, ಹಿಡಿದ ಪ್ರಯತ್ನವನ್ನು ಕೈಬಿಡ ಕೂಡದಲ್ಲವೆ ?

ರಾಕ್ಷಸ—ಹಿಡಿದದ್ದನ್ನು ಕೈಬಿಡಕೂಡದೆನ್ನುವುದಕ್ಕೆ ನಿಮ್ಮೆಲ್ಲರ ಪ್ರಯತ್ನಗಳೇ ಪ್ರತ್ಯಕ್ಷ ನಿದರ್ಶನ. . . . ಮುಂದೇನಾಯಿತು ?

ವಿರಾಧಗುಪ್ತ—ಅಲ್ಲಿಂದ ಈಚೆಗೆ ಚಾಣಕ್ಯನು ಸಾವಿರ ಕಣ್ಣಾಗಿ ಚಂದ್ರಗುಪ್ತನನ್ನು ರಕ್ಷಿಸಲು ಮೊದಲು ಮಾಡಿದನು. ಇಷ್ಟಕ್ಕೆ ಮುಗಿಯಲಿಲ್ಲ. ಇಂಥಿಂಥವರು ಹೀಗೆ ಹೀಗೆ ಮಾಡಿದರು ಎಂದು ಶೋಧಿಸಿ ಶೋಧಿಸಿ ನಿಮಗೆ ಆಪ್ತರಾದ ಪುರನಿವಾಸಿಗಳನ್ನು ನಿಗ್ರಹಿಸಿದನು.

ರಾಕ್ಷಸ—(ಸಂಭ್ರಮೋದ್ವೇಗಗಳಿಂದ) ಹೇಳು ಹೇಳು, ಯಾರುಯಾರನ್ನು ನಿಗ್ರಹಿಸಿದನು ?

ವಿರಾಧಗುಪ್ತ—ಮೊದಲನೆಯವನು ಕ್ಷಪಣಕ ಜೀವಸಿದ್ಧಿ. ಅವನನ್ನು ಅವಮಾನಪಡಿಸಿ ನಗರದಿಂದ ಹೊರಕ್ಕೆ ತಳ್ಳಿಸಿದನು.

ರಾಕ್ಷಸ—(ತನ್ನಲ್ಲಿ) ಇದನ್ನೇನೋ ಸಹಿಸಿಕೊಳ್ಳಬಹುದು ; ಸಂನ್ಯಾಸಿಗೆ

ಸ್ಥಾನಭ್ರಂಶದಿಂದ ಕಷ್ಟವಾಗಲಾರದು. (ಪ್ರಕಾಶವಾಗಿ) ಅವನ ಅಪರಾಧವೇನಂತೆ?

ವಿರಾಧಗುಪ್ತ—ರಾಕ್ಷಸನು ನೇಮಿಸಿದ ವಿಷಕನ್ಯೆಯನ್ನು ಅವನು ಪ್ರಯೋಗಿಸಿ ಪರ್ವತೇಶ್ವರನನ್ನು ಕೊಂದನೆಂದು ಊರಲ್ಲೆಲ್ಲಾ ಸಾರಿದರು.

ರಾಕ್ಷಸ—ಭಲೆ ಕೌಟಿಲ್ಯ, ಭಲೆ! ನಿನ್ನ ಅಪಕೀರ್ತಿಯನ್ನು ತೊಲಗಿಸಿದೆ; ನನ್ನ ತಲೆಯ ಮೇಲೆ ಅದನ್ನು ಉರುಳಿಸಿದೆ; ಅರ್ಧ ರಾಜ್ಯವನ್ನು ಉಳಿಸಿಕೊಂಡೆ. ನಿನ್ನ ಒಂದೊಂದು ಉಪಾಯವೇ ಬಹು ಫಲಗಳನ್ನು ಬಿಡುತ್ತಿದೆಯಲ್ಲ! . . . ಆ ಮೇಲೆ?

ವಿರಾಧಗುಪ್ತ—ಆ ಮೇಲೆ, ಚಂದ್ರಗುಪ್ತನನ್ನು ಕೊಲ್ಲುವುದಕ್ಕಾಗಿ ಇವನು ವೈದ್ಯ ಮೊದಲಾದವರನ್ನು ನೇಮಿಸಿದ್ದನೆಂದು ನಗರದಲ್ಲೆಲ್ಲಾ ಡಂಗುರ ಹೊಯಿಸಿ ಶಕಟದಾಸನನ್ನು ಶೂಲಕ್ಕೇರಿಸಿದನು.

ರಾಕ್ಷಸ—(ಕಣ್ಣೀರನ್ನು ಮಿಡಿದು) ಹಾ ಮಿತ್ರ ಶಕಟದಾಸ, ನಿನಗೆ ಇಂಥ ಅನುಚಿತವಾದ ಮರಣ ಒರಬಹುದೇ? . . . ಹಾಗಲ್ಲ. ಸ್ವಾಮಿ ಕಾರ್ಯಕ್ಕಾಗಿ ಪ್ರಾಣ ತೆತ್ತವನನ್ನು ಕುರಿತು ದುಃಖಿಸಬಾರದು. ದುಃಖಪಡಬೇಕಾದದ್ದು ನಮ್ಮನ್ನು ಕುರಿತು—ನಂದಕುಲವೇ ನಾಶವಾಗಿದ್ದರೂ ಇನ್ನೂ ಬದುಕಲು ಬಯಸುವ ನಮ್ಮನ್ನು ಕುರಿತು.

ವಿರಾಧಗುಪ್ತ—ಅಮಾತ್ಯರೇ, ಸ್ವಾಮಿಕಾರ್ಯವನ್ನು ಸಾಧಿಸಬೇಕೆಂದು ತಾನೆ ನೀವೂ ಪ್ರಯತ್ನಿಸುತ್ತಿದ್ದೀರಿ?

ರಾಕ್ಷಸ—(ಆವೇಶದಿಂದ) ಮಿತ್ರ, ಇದಕ್ಕಾಗಿಯೇ ನಾನು ಇನ್ನೂ ಬದುಕಿರುವುದು; ಇದಕ್ಕಾಗಿಯೇ ಪರಲೋಕಗತರಾದ ಪ್ರಭುಗಳನ್ನು ಈ ಕೃತಘ್ನನು ಇನ್ನೂ ಹಿಂಬಾಲಿಸದಿರುವುದು. . . . ಹೇಳಿಬಿಡು, ಮಿಕ್ಕ ಮಿತ್ರರ ಕ್ಲೇಶವನ್ನೂ ಕೇಳಲು ಸಿದ್ಧನಾಗಿದ್ದೇನೆ.

ವಿರಾಧಗುಪ್ತ—ಈ ಸುಳಿವನ್ನು ತಿಳಿದು ಚಂದನದಾಸಸೆಟ್ಟಿ ನಿಮ್ಮ ಕುಟುಂಬವನ್ನು ಗೋಪ್ಯವಾದ ಕಡೆಗೆ ಸಾಗಿಸಿದನು.

ರಾಕ್ಷಸ—ಕ್ರೂರ ಚಾಣಕ್ಯನಿಗೆ ವಿರುದ್ಧವಾಗಿ ಅವನು ನಡೆದದ್ದು ಅನುಚಿತ.

ವಿರಾಧಗುಪ್ತ—ಅಮಾತ್ಯರೇ, ಮಿತ್ರದ್ರೋಹ ಅದಕ್ಕಿಂತಲೂ ಅನುಚಿತ ವಲ್ಲವೇ ?

ರಾಕ್ಷಸ—ಬಳಿಕ ?

ವಿರಾಧಗುಪ್ತ—ಬಳಿಕ ಎಷ್ಟು ಕೇಳಿದರೂ ಆತನು ನಿಮ್ಮ ಮನೆಯವರನ್ನು ಒಪ್ಪಿಸಲಿಲ್ಲ; ಆಗ ಚಾಣಕ್ಯಹತಕನು ಅತಿ ಕ್ರುದ್ಧನಾಗಿ. . . .

ರಾಕ್ಷಸ—(ಉದ್ವೇಗದಿಂದ) ಏನು, ಅವನನ್ನು ಕೊಲ್ಲಿಸಿಬಿಟ್ಟನೇ ?

ವಿರಾಧಗುಪ್ತ—ಇಲ್ಲ, ಇಲ್ಲ. ಅವನ ಆಸ್ತಿಯೆಲ್ಲವನ್ನೂ ಮುಟ್ಟುಗೋಲು ಹಾಕಿಸಿ, ಹೆಂಡತಿ ಮಕ್ಕಳೊಡನೆ ಸೆರೆಮನೆಯಲ್ಲಿ ಇರಿಸಿದ್ದಾನೆ.

ರಾಕ್ಷಸ—ಹಾಗಾದರೆ, ರಾಕ್ಷಸನ ಕುಟುಂಬದವರು ಗೋಪ್ಯವಾಗಿ ಸಾಗಿದ ರೆಂದು ಏಕೆ ಹಿಗ್ಗುತ್ತಾ ಹೇಳುತ್ತೀಯೆ ? ಹೆಂಡತಿ ಮಕ್ಕಳೊಡನೆ ರಾಕ್ಷಸನೇ ಬಂಧನಕ್ಕೆ ಸಿಕ್ಕಿಬಿದ್ದನೆಂದು ಹೇಳು.

(ಚಾರನು ಪ್ರವೇಶಿಸುವನು.)

ಚಾರ—ಅಮಾತ್ಯರಿಗೆ ಜಯವಾಗಲಿ. ಶಕಟದಾಸನು ಬಾಗಿಲ ಬಳಿ ಬಂದು ನಿಂತಿದ್ದಾನೆ.

ರಾಕ್ಷಸ—(ವಿಸ್ಮಯದಿಂದ) ಏನೋ, ಸತ್ಯವಾಗಿ ?

ಚಾರ—ಅಮಾತ್ಯರ ಪಾದದಲ್ಲಿ ಸುಳ್ಳನ್ನು ಅರಿಕೆಮಾಡಿಯೇನೆ ?

ರಾಕ್ಷಸ—ವಿರಾಧಗುಪ್ತ, ಇದು ಹೇಗೆ ?

ವಿರಾಧಗುಪ್ತ—ಇದ್ದರೂ ಇರಬಹುದು, ಅಮಾತ್ಯರೇ. ಬದುಕತಕ್ಕವನನ್ನು ದೈವವೇ ಕಾಪಾಡುತ್ತದೆ.

ರಾಕ್ಷಸ—ಪ್ರಿಯಂವದಕ, ಇನ್ನೂ ಏಕೆ ತಡ ? ಕೂಡಲೇ ಒಳಕ್ಕೆ ಕಳುಹಿಸು.

ಚಾರ—ಅಪ್ಪಣೆ. (ಹೋಗುವನು.)

(ಶಕಟದಾಸನೂ ಸಿದ್ಧಾರ್ಥಕನೂ ಪ್ರವೇಶಿಸುವರು.)

ಶಕಟದಾಸ—(ರಾಕ್ಷಸನನ್ನು ಸಮೀಪಿಸಿ, ಪ್ರಕಾಶವಾಗಿ) ಅಮಾತ್ಯರಿಗೆ ಜಯ ವಾಗಲಿ.

ರಾಕ್ಷಸ—(ನೋಡಿ, ಹರ್ಷದಿಂದ) ಬಂದೆಯಾ, ಶಕಟದಾಸ ! ಕೌಟಿಲ್ಯನ ದೃಷ್ಟಿಗೆ

ಬಿದ್ದೂ ಮತ್ತೆ ನೀನು ನಮಗೆ ಗೋಚರವಾದದ್ದು ನಮ್ಮ ಭಾಗ್ಯ ವಿಶೇಷ. ಬಾ; ನನ್ನನ್ನು ಅಪ್ಪಿಕೊ. (ಶಕಟದಾಸನು ಹಾಗೆಯೇ ಮಾಡುವನು.) ಶಕಟದಾಸ, ಇಂಥ ಆನಂದವನ್ನು ನನಗೆ ಒದಗಿಸಿ ಕೊಟ್ಟವರು ಯಾರು?

ಶಕಟದಾಸ—(ಸಿದ್ಧಾರ್ಥಕನನ್ನು ತೋರಿಸಿ) ಈ ನನ್ನ ಪ್ರಿಯಮಿತ್ರ ಸಿದ್ಧಾರ್ಥಕ. ಇವನೇ ಕೊಲೆಗಾರರನ್ನು ಓಡಿಸಿ ವಧ್ಯಸ್ಥಾನದಿಂದ ನನ್ನನ್ನು ಸೆಳೆದುಕೊಂಡು ಬಂದವನು.

ವಿರಾಧಗುಪ್ತ—ಹಾಗಾದರೆ ನಾನು ಕುಸುಮಪುರವನ್ನು ಬಿಟ್ಟಕೂಡಲೆ ಇದು ನಡೆದಿರಬೇಕು.

ರಾಕ್ಷಸ—(ಸಂತೋಷದಿಂದ) ಅಯ್ಯಾ ಸಿದ್ಧಾರ್ಥಕ, ಈ ಪ್ರಿಯಕಾರ್ಯಕ್ಕಾಗಿ ಏನನ್ನು ಕೊಟ್ಟರೆ ತಾನೇ ಸಾಕಾದೀತು? ಆದರೂ ಇದನ್ನು ಹಿಡಿ. (ತನ್ನ ಮೈಯಿಂದ ಆಭರಣಗಳನ್ನು ಕಳಚಿಕೊಡುವನು.)

ಸಿದ್ಧಾರ್ಥಕ—(ಸ್ವೀಕರಿಸಿ, ರಾಕ್ಷಸನ ಪಾದಕ್ಕೆ ಬಿದ್ದು) ಅಮಾತ್ಯರೇ, ಇಲ್ಲಿಗೆ ನಾನು ಬರುವುದಕ್ಕೆ ಇದೇ ಮೊದಲ ಸಲ; ಒಬ್ಬರ ಪರಿಚಯವೂ ನನಗಿಲ್ಲ: ಆದ್ದರಿಂದ ತಾವು ದಯಪಾಲಿಸಿದ ಈ ಪಾರಿತೋಷಿಕವನ್ನು ಯಾರ ವಶಕ್ಕೂ ಕೊಡುವ ಹಾಗಿಲ್ಲ. ಈ ಮುದ್ರಿಕೆಯಿಂದ ಇದಕ್ಕೆ ಮೊಹರು ಮಾಡಿಸಿ ತಮ್ಮ ಭಂಡಾರದಲ್ಲಿಯೇ ಇಡಿಸಿಕೊಡಬೇಕು. ನನಗೆ ಅಗತ್ಯಬಿದ್ದಾಗ ತೆಗೆದುಕೊಳ್ಳುತ್ತೇನೆ.

ರಾಕ್ಷಸ—ಅದಕ್ಕೇನು? ಶಕಟದಾಸ, ಹಾಗೆಯೇ ಮಾಡು.

ಶಕಟದಾಸ—ಅಪ್ಪಣೆ. (ಮುದ್ರಿಕೆಯನ್ನು ತೆಗೆದುಕೊಂಡು ನೋಡಿ, ರಾಕ್ಷಸನಿಗೆ) ಅಮಾತ್ಯರೇ, ಈ ಮುದ್ರಿಕೆಯ ಮೇಲೆ ತಮ್ಮ ಹೆಸರಿದೆ.

ರಾಕ್ಷಸ—ಎಲ್ಲಿ? (ತೆಗೆದುಕೊಂಡು ನೋಡಿ, ತನ್ನಲ್ಲಿ) ನಿಜ. ನಾನು ಕುಸುಮಪುರದಿಂದ ಹೊರಟು ಬರುವಾಗ, ನನ್ನಾಕೆ ನೆನಪಿಗಿರಲೆಂದು ಇದನ್ನು ನನ್ನ ಕೈಯಿಂದ ತೆಗೆದುಕೊಂಡಿದ್ದಳು. ಇದು ಇವನ ಕೈಗೆ ಹೇಗೆ ಬಂದಿತು? (ಪ್ರಕಾಶವಾಗಿ) ಸಿದ್ಧಾರ್ಥಕ, ನಿನಗೆಲ್ಲಿ ಸಿಕ್ಕಿತು ಈ ಮುದ್ರಿಕೆ?

ಸಿದ್ಧಾರ್ಥಕ—ಕುಸುಮಪುರದಲ್ಲಿ ಚಂದನದಾಸಸೆಟ್ಟಿಯೆಂಬ ರತ್ನಪಡಿವರ್ತಕನಿದ್ದಾನೆ. ಅವನ ಮನೆಯ ಬಾಗಿಲ ಹತ್ತಿರ ಇದು ನನಗೆ ಸಿಕ್ಕಿತು.

ರಾಕ್ಷಸ—ಅಸಂಭವವಲ್ಲ.

ಸಿದ್ಧಾರ್ಥಕ—ಅಮಾತ್ಯರು ಏನೋ ಸಂದೇಹಪಡುವ ಹಾಗಿದೆ.

ರಾಕ್ಷಸ—ಇಲ್ಲ, ಇಲ್ಲ. ಶ್ರೀಮಂತರ ಮನೆಯ ಬಳಿ ಇಂಥ ವಸ್ತುಗಳು ಸಿಕ್ಕುವುದು ಅಸಂಭವವಲ್ಲ ಎಂದು ಯೋಚಿಸುತ್ತಿದ್ದೆ.

ಶಕಟದಾಸ—ಸಿದ್ಧಾರ್ಥಕ, ಈ ಮುದ್ರಿಕೆಯ ಮೇಲೆ ಅಮಾತ್ಯರ ಹೆಸರಿರುವುದರಿಂದ ಇದನ್ನು ಅವರಿಗೆ ಒಪ್ಪಿಸಿಬಿಡು. ಅವರು ಇದಕ್ಕೂ ಮಿಗಿಲಾದ ಹಣವನ್ನು ಪ್ರತಿಫಲವಾಗಿ ಕೊಡುತ್ತಾರೆ.

ಸಿದ್ಧಾರ್ಥಕ—ಈ ಮುದ್ರಿಕೆಯನ್ನು ಅಮಾತ್ಯರು ಒಪ್ಪಿಸಿಕೊಳ್ಳುತ್ತಾರೆಂದರೆ ಅದೇ ಅನುಗ್ರಹವಲ್ಲವೇ ? (ಮುದ್ರಿಕೆಯನ್ನು ಅರ್ಪಿಸುವನು.)

ರಾಕ್ಷಸ—ಶಕಟದಾಸ, ಈ ಮುದ್ರಿಕೆಯನ್ನೇ ಉಪಯೋಗಿಸುತ್ತಾ ನಿನ್ನ ರಾಯಸದ ಕೆಲಸವನ್ನು ನೋಡುತ್ತಿರು.

ಶಕಟದಾಸ—ಅಪ್ಪಣೆ.

ಸಿದ್ಧಾರ್ಥಕ—ಅಮಾತ್ಯರಲ್ಲಿ ಒಂದು ಅರಿಕೆಯುಂಟು.

ರಾಕ್ಷಸ—ಸಂಕೋಚವಿಲ್ಲದೆ ಹೇಳು.

ಸಿದ್ಧಾರ್ಥಕ—ತಮಗೆ ತಿಳಿದೇ ಇದೆ: ಚಾಣಕ್ಯನಿಗೆ ವಿರುದ್ಧವಾಗಿ ನಡೆದ ಮೇಲೆ ಮತ್ತೆ ಕುಸುಮಪುರಕ್ಕೆ ನಾನು ಕಾಲಿಡುವ ಹಾಗಿಲ್ಲ. ಆದ್ದರಿಂದ ಅಮಾತ್ಯರ ಪಾದಸೇವೆಯಲ್ಲೇ ಇರಬೇಕೆಂದು ನನ್ನ ಕೋರಿಕೆ.

ರಾಕ್ಷಸ—ನಮಗೂ ಅದೇ ಇಷ್ಟ. ನಿನ್ನ ಅಭಿಪ್ರಾಯ ತಿಳಿಯದೆ ಹೇಗೆ ಕೇಳುವುದೆಂದು ಸುಮ್ಮನಿದ್ದೆವು. ಹಾಗೆಯೇ ಮಾಡು.

ಸಿದ್ಧಾರ್ಥಕ—(ಹರ್ಷದಿಂದ) ಅಮಾತ್ಯರ ಅನುಗ್ರಹ.

ರಾಕ್ಷಸ—ಶಕಟದಾಸ, ಇನ್ನು ಸಿದ್ಧಾರ್ಥಕನು ವಿಶ್ರಮಿಸಿಕೊಳ್ಳಬೇಡವೆ ?

ಶಕಟದಾಸ—ಅಪ್ಪಣೆ. (ಸಿದ್ಧಾರ್ಥಕನನ್ನು ಕರೆದುಕೊಂಡು ಹೋಗುವನು.)

ರಾಕ್ಷಸ—ವಿರಾಧಗುಪ್ತ, ನಿನ್ನನ್ನು ಬಹಳ ಹೊತ್ತು ಕಾಯಿಸಬೇಕಾಯಿತು. ಮುಂದಿನ ವಿಷಯವೇನು ? . . . ನಾನೊಂದು ಪ್ರಶ್ನೆ ಹಾಕ

ಬೇಕೆಂದಿದ್ದೆ. ಅಲ್ಲಿಯ ನಡೆವಳಿಕೆಯನ್ನು ಕೇಳಿ ಬಾಯೇ ಬರುವುದಿಲ್ಲ. ಆದರೂ, ಚಂದ್ರಗುಪ್ತನ ಆಸ್ಥಾನದಲ್ಲಿ ನಮ್ಮ ಭೇದೋಪಾಯಗಳೇನಾದರೂ ಸಾಗುತ್ತಿವೆಯೇ ?

ವಿರಾಧಗುಪ್ತ—(ಸ್ವಲ್ಪ ಸಂತೋಷದಿಂದ) ಅಮಾತ್ಯರೆ, ನಾನು ತಂದಿರುವುದು ಅದೊಂದೇ ಶುಭವಾರ್ತೆ.

ರಾಕ್ಷಸ—(ಅತ್ಯೌತ್ಸುಕ್ಯದಿಂದ) ಏನು ? ಹೇಗೆ ?

ವಿರಾಧಗುಪ್ತ—ಅದರ ಚಿಹ್ನೆಗಳು ಕೊಂಚ ಕೊಂಚವಾಗಿ ತಲೆದೋರುತ್ತಿವೆ. ಮಲಯಕೇತುವಿಗೆ ತಪ್ಪಿಸಿಕೊಳ್ಳಲು ಅವಕಾಶ ಕೊಟ್ಟನೆಂದು ಚಂದ್ರಗುಪ್ತನು ಚಾಣಕ್ಯನ ಮೇಲೆ ಅಸಮಾಧಾನ ಪಟ್ಟಿದ್ದಾನಂತೆ.

ರಾಕ್ಷಸ—ಚಾಣಕ್ಯ ಚಂದ್ರಗುಪ್ತರೊಳಗೆ ಅಸಮಾಧಾನವೆ? ವಿರಾಧಗುಪ್ತ, ಇದು ನಂಬಿಕೆಗೆ ಮೀರಿದ ಶುಭವಾರ್ತೆ.

ವಿರಾಧಗುಪ್ತ—ಅಮಾತ್ಯರು ಲಾಲಿಸಬೇಕು. ಚಾಣಕ್ಯನು ವಿಜಯದಿಂದ ಮದಿಸಿಹೋಗಿ ಚಂದ್ರಗುಪ್ತನ ಆಜ್ಞೆಗಳನ್ನು ಆಗಾಗ ಮುರಿಯುತ್ತಿರುವುದಂತೂ ಸತ್ಯ. ಇದನ್ನು ನಾನೂ ಬಲ್ಲೆ. ಚಂದ್ರಗುಪ್ತನು ತಾನೆ ಎಷ್ಟು ದಿನ ಸಹಿಸಿಯಾನು ?

ರಾಕ್ಷಸ—(ಹರ್ಷದಿಂದ) ವಿರಾಧಗುಪ್ತ, ಹಾಗಾದರೆ ಇದೇ ಹಾವಾಡಿಗನ ವೇಷದಿಂದ ಮತ್ತೆ ಕುಸುಮಪುರಕ್ಕೆ ಹೋಗು. ಅಲ್ಲಿ ನಮ್ಮ ವಸಂತಕನೂ ಚತುರಕನೂ ವೈತಾಳಿಕರ ವೇಷದಿಂದ ಇದ್ದಾರಷ್ಟೆ. ಅವರಿಗೆ ನಾನು ಹೇಳಿದೆನೆಂದು ತಿಳಿಸು. ಅವರು ಸಮಯ ದೊರೆತಾಗ ಸ್ತೋತ್ರಪಾಠಮಾಡಿ ಚಂದ್ರಗುಪ್ತನು ಚಾಣಕ್ಯನ ಮೇಲೆ ಕೆರಳುವಂತೆ ಮಾಡಲಿ. ಅಲ್ಲಿಯ ರಹಸ್ಯವೃತ್ತಾಂತವನ್ನೆಲ್ಲಾ ನನಗೆ ಕರಭಕನ ಸಂಗಡ ಹೇಳಿ ಕಳುಹಿಸಲಿ.

ವಿರಾಧಗುಪ್ತ—ಅಪ್ಪಣೆ. (ಹೋಗುವನು.)

ರಾಕ್ಷಸ—ದುರುಳ ಚಾಣಕ್ಯನಿಗೂ ಚಂದ್ರಗುಪ್ತನಿಗೂ ವೈಮನಸ್ಯ ಹುಟ್ಟಿದ್ದೀತೆ? . . . ಹುಟ್ಟಿರಬೇಕು. ಚಂದ್ರಗುಪ್ತನು ತೇಜಸ್ವಿ, ಚಕ್ರವರ್ತಿ ; ಅವನಿಗೆ ಪದವಿಯ ದರ್ಪವಿದೆ. ಚಾಣಕ್ಯನು ಅಭಿಮಾನಿ ;

ಅವನಿಗೆ "ಮೌರ್ಯನು ನನ್ನನ್ನು ಆಶ್ರಯಿಸಿ ರಾಜನಾದನು" ಎಂಬ ಅಹಂಕಾರವಿದೆ. ಒಬ್ಬನಿಗೆ ರಾಜ್ಯ ದೊರೆಯಿತು; ಮತ್ತೊಬ್ಬನಿಗೆ ಪ್ರತಿಜ್ಞೆ ಪೂರ್ಣವಾಯಿತು.—ಹೀಗೆ ಇಬ್ಬರ ಉದ್ದೇಶವೂ ಕೈಗೂಡಿರುವುದೇ ಮುಂದೆ ಅವರಿಬ್ಬರ ಮೈತ್ರಿಯನ್ನು ಕಳಲಿಸುವುದಕ್ಕೆ ಸಾಧನವಾದೀತು.

(ಚಾರನು ಮೂರು ಆಭರಣದ ಪೆಟ್ಟಿಗೆಗಳೊಡನೆ ಪ್ರವೇಶಿಸುವನು.)

ಚಾರ—ಅಮಾತ್ಯರಿಗೆ ಜಯವಾಗಲಿ.

ರಾಕ್ಷಸ—ಏನು, ನಿನ್ನ ಕೈಯಲ್ಲಿ ?

ಚಾರ—ಮೂರು ಒಳ್ಳೆಯ ಆಭರಣದ ಪೆಟ್ಟಿಗೆಗಳು ಮಾರಾಟಕ್ಕೆ ಬಂದಿವೆ. ಶಕಟದಾಸನು ತಮ್ಮ ಪರಾಂಬರಿಕೆಗಾಗಿ ಕಳುಹಿಸಿದ್ದಾನೆ. (ತೆರೆದು ತೋರಿಸುವನು.)

ರಾಕ್ಷಸ—(ನೋಡಿ) ಆಹಾ! ತುಂಬ ಪ್ರಶಸ್ತವಾಗಿವೆ. ಹತ್ತಿರ ಇದ್ದವುಗಳನ್ನು ವಿನಿಯೋಗಿಸಿದ್ದು ಬೇರೆ ಆಯಿತು. ಎಲಾ, ಶಕಟದಾಸನಿಗೆ ಕೊಂಡುಕೊಳ್ಳುವಂತೆ ಹೇಳು. . . . ವರ್ತಕರು ಯಾವ ದೇಶದವರು ?

ಚಾರ—ನಾನು ಬರುವಾಗ ಶಕಟದಾಸನು ವಿಚಾರಮಾಡುತ್ತಿದ್ದನು.

ರಾಕ್ಷಸ—ಆಗಲಿ, ಕೊಂಡುಕೊಳ್ಳಬೇಕೆಂದು ಹೇಳು.

ಚಾರ—ಅಪ್ಪಣೆ. (ಹೋಗುವನು.)

ತೆರೆ.

# ಮೂರನೆಯ ಅಂಕ

(ಕುಸುಮಪುರದಲ್ಲಿ ಸುಗಾಂಗ ಪ್ರಾಸಾದ. ಅದರ ಹೊರ ಹಜಾರದಲ್ಲಿ ರಾಜಯೋಗ್ಯವಾದ ಪೀಠಗಳು ಸಿದ್ಧವಾಗಿರುವುವು. ಹುಣ್ಣಿಮೆಯ ಬೆಳುದಿಂಗಳು ಬಿದ್ದಿರುವುದು. ಚಂದ್ರಗುಪ್ತನ ಕಂಚುಕಿ ಪ್ರವೇಶಿಸುವನು.)

ಕಂಚುಕಿ—(ಸುತ್ತಲೂ ನೋಡುತ್ತಾ) ಇದೇನು ಕೇಡು! ಬೀದಿಗಳೆಲ್ಲಾ ಮೊದಲಿನಂತೆಯೇ ಹಾಳು ಸುರಿಯುತ್ತಿವೆ; ನಂದಮರಣದ ಆಶೌಚವು ನಗರಕ್ಕೆ ಇನ್ನೂ ಬಿಡದೆ ಅಂಟಿಕೊಂಡಹಾಗಿದೆ. . . . ಬೀದಿಗಳನ್ನು ಸಿಂಗರಿಸಿ ಹೂವೆರಚಿಲ್ಲ! ಹೊಸ ತೋರಣಗಳನ್ನು ಕಟ್ಟಿಲ್ಲ! ಧ್ವಜಗಳನ್ನು ನಟ್ಟಿಲ್ಲ! ಕೌಮುದೀಮಹೋತ್ಸವದ ಚಿಹ್ನೆಯೇ ಇಲ್ಲ. ಏನು ಗತಿ! ಮಹಾರಾಜರು ಬರುವ ಸಮಯವಾಯಿತು. . . . ಈ ನಗರಾಧಿಕಾರಿಗಳು ಈಚೆಗೆ ತುಂಬ ಮದಿಸಿಹೋಗಿದ್ದಾರೆ. ಯಾರ ಲಕ್ಷ್ಯವೂ ಇಲ್ಲ ಅವರಿಗೆ. ಒಬ್ಬನ ಮುಖವಾದರೂ ಕಾಣಬೇಡವೆ ಇಲ್ಲಿ? (ಆ ಕಡೆ ಈ ಕಡೆ ನೋಡುವನು.) ಓಹೋ, ಇವನು ಯಾರೋ ಮೆಲ್ಲಗೆ ಮದುವಣಿಗನ ಹಾಗೆ ಬರುತ್ತಿದ್ದಾನೆ. ಮೃತ್ಯುದೇವತೆಯನ್ನು ವರಿಸುವ ಆಸೆ ಹುಟ್ಟಿದ್ದೀತು. (ಗಟ್ಟಿಯಾಗಿ) ಬಾರಯ್ಯಾ ಬೇಗ ಬೇಗ! ನಿಮಗೇನು ಪ್ರಾಣದ ಮೇಲೆ ಇಚ್ಛೆಯೇ ಇಲ್ಲವೋ?

ನಗರಾಧಿಕಾರಿ—(ಬೇಗ ಬಂದು) ಇದೇನು . . .

ಕಂಚುಕಿ—(ಬಾಯಿ ಹಾಕಿ) ಮತ್ತೇನು? ಮಹಾರಾಜರೇ ಸ್ವತಃ ಅಪ್ಪಣೆ ಮಾಡಿದ್ದರೂ ನಿಮಗೆ ಮೈಮೇಲೆ ಎಚ್ಚರವಿಲ್ಲವೋ? ಪಟ್ಟಣದ ಅಲಂಕಾರ ಇನ್ನು ಯಾವಾಗ ನಡೆಯುವುದು?

ನಗರಾಧಿಕಾರಿ—ಪಟ್ಟಣದ ಅಲಂಕಾರ! . . . ಅದರ ಮಾತೇಕೆ ಈಗ?

ಕಂಚುಕಿ—(ಕೋಪದಿಂದ ಉರಿಯುತ್ತಾ) ನಿನಗೆಲ್ಲೋ ಹುಚ್ಚು ಹಿಡಿದಿರಬೇಕು. ಇಲ್ಲದಿದ್ದರೆ ಕೌಮುದೀಮಹೋತ್ಸವದ ಏರ್ಪಾಡನ್ನು ಬಿಟ್ಟು ಹೀಗೆ ನನ್ನ ಸಂಗಡ ವಾದಕ್ಕೆ ನಿಂತುಕೊಳ್ಳುತ್ತಿದ್ದೆಯಾ?

ನಗರಾಧಿಕಾರಿ—(ತನ್ನಲ್ಲಿ) ಇತ್ತ ಕೆರೆ, ಅತ್ತ ಬಾವಿ. ಈ ರಾಜಸೇವೆ ಸಾಕು. (ಪ್ರಕಾಶವಾಗಿ) ಹಾಗಲ್ಲ ಸ್ವಾಮಿ. ತಮ್ಮ ಸಂಗಡ ವಾದಮಾಡು ವುದಕ್ಕೆ ನಾನು ಯಾರು? ನಾವು ಪಟ್ಟಣವನ್ನು ಅಲಂಕರಿಸಲು ಪ್ರಾರಂಭಿಸಿದ್ದೆವು; ಅಷ್ಟರಲ್ಲೇ ಕೌಮುದೀಮಹೋತ್ಸವವನ್ನು ನಿಲ್ಲಿಸಬೇಕೆಂದು ಅಪ್ಪಣೆ ಬಂದಿತು.

ಕಂಚುಕಿ—ಯಾರು ಅಪ್ಪಣೆಮಾಡಿದವರು?

ನಗರಾಧಿಕಾರಿ—ಮತ್ತೆ ಯಾರಿಗೆ ಅಷ್ಟು ಧೈರ್ಯ? ಆರ್ಯ ಚಾಣಕ್ಯರು ಹೇಳಿಕಳುಹಿಸಿದರು.

ಕಂಚುಕಿ—ಸರಿ, ಚೆನ್ನಾಯಿತು! . . . . ಈಗ ಏನು ಮಾಡಲಿ? . . . . (ನೇಪಥ್ಯದಲ್ಲಿ 'ಚಂದ್ರಗುಪ್ತ ಮಹಾರಾಜರಿಗೆ ಪರಾಕ್' ಎಂದು ಶಬ್ದ ವಾಗುವುದು) ಮಹಾರಾಜರು ಬಂದೇ ಬಿಟ್ಟರು! ನೀನು ಎಲ್ಲಿ ಯಾದರೂ ಹೋಗು. ಎದುರಿಗಿದ್ದರೆ ಅವರ ಕೋಪಕ್ಕೆ ಆಹುತಿ ಯಾದೀಯೆ.

(ನಗರಾಧಿಕಾರಿ ಮರೆಯಾಗುವನು. ಚಂದ್ರಗುಪ್ತನು ಪ್ರತೀಹಾರಿಯೊಂದಿಗೆ ಪ್ರವೇ ಶಿಸುವನು. ಕಂಚುಕಿ ಅವನಿಗೆ ವಂದಿಸಿ ನಿಲ್ಲುವನು.)

ಚಂದ್ರಗುಪ್ತ—ಜಯಸೇನ, ನಾವು ಉತ್ಸವವನ್ನು ನೋಡಬೇಕಾದದ್ದು ಇಲ್ಲಿ ತಾನೆ?

ಕಂಚುಕಿ—ಇದೇ ಸುಗಾಂಗ ಪ್ರಾಸಾದ. ಮಹಾಸ್ವಾಮಿಯವರು ಮೆಟ್ಟಲು ಗಳನ್ನು ಮೆಲ್ಲಗೆ ಹತ್ತಬೇಕು.

ಚಂದ್ರಗುಪ್ತ—(ಹತ್ತಿ, ದಿಕ್ಕುಗಳನ್ನು ನೋಡುತ್ತಾ) ಆಹಾ! ಏನು ಸೊಗಸು ಈ ಶರತ್ಕಾಲ! ಈ ಬಿಳಿ ಮೋಡಗಳು ಬಿಳಿ ಮರಳಿನ ಗುಪ್ಪೆಗಳ ಹಾಗೆ ಅಲ್ಲಲ್ಲಿ ಹರಡಿಕೊಂಡಿವೆ. ಬೆಳುದಿಂಗಳಿನ ಮಳೆ ಸುರಿದು ಭೂಮಿ ಯನ್ನೂ ಆಕಾಶವನ್ನೂ ಒಂದುಮಾಡಿದೆ. (ಆಲಿಸಿ) ಈ ಸಾರಸಪಕ್ಷಿಗಳ ಕಲಕಲ ಕರ್ಣಾಮೃತವಾಗಿದೆ. (ದೃಷ್ಟಿಯನ್ನು ಕೆಳಗಿಳಿಸಿ) ಇಷ್ಟಾದರೂ ಏಕೋ ಬಿಮ್ಮೆನ್ನಿಸುತ್ತದೆ? ಹಾ, ಕೌಮುದೀಮಹೋತ್ಸವದ

ಚಿಹ್ನೆಯೇ ಇಲ್ಲ. ಜಯಸೇನ, ಕೌಮುದೀಮಹೋತ್ಸವವನ್ನು ನಡಸಬೇಕೆಂದು ನಾವು ಆಜ್ಞೆಮಾಡಿದ್ದನ್ನು ನಗರದಲ್ಲಿ ಸಾರಿದರಷ್ಟೆ.

ಕಂಚುಕಿ—ಹೌದು, ಮಹಾಸ್ವಾಮಿ.

ಚಂದ್ರಗುಪ್ತ—ಹಾಗಾದರೆ ಪುರಜನರು ನಮ್ಮ ಆಜ್ಞೆಯನ್ನು ಏಕೆ ಪಾಲಿಸಲಿಲ್ಲ?

ಕಂಚುಕಿ—(ಕಿವಿಗಳನ್ನು ಮುಚ್ಚಿಕೊಂಡು) ಶಾಂತಂ ಪಾಪಂ, ಶಾಂತಂ ಪಾಪಂ! ಜಗತ್ತಿನಲ್ಲೇ ಎದುರಿಲ್ಲದೆ ನಡೆಯತಕ್ಕ ಮಹಾಸ್ವಾಮಿಯವರ ಆಜ್ಞೆಯನ್ನು ಪುರಜನರು ಹೇಗೆ ಮೀರಿಯಾರು?

ಚಂದ್ರಗುಪ್ತ—ಹಾಗಿದ್ದರೆ, ಕುಸುಮಪುರದಲ್ಲಿ ಕೌಮುದೀಮಹೋತ್ಸವ ಅದೇಕೆ ಇನ್ನೂ ಮೊದಲಾಗಿಲ್ಲ? ನೋಡು. ಬೀದಿಗಳಲ್ಲಿ ಸ್ತ್ರೀಯರೂ ಪುರುಷರೂ ಸರಸವಾಡುತ್ತಾ ನಿಶ್ಯಂಕೆಯಿಂದ ಸಂಚರಿಸಬೇಡವೆ? ಪುರಜನರು ಹುರುಡಿನಿಂದ ಮನೆಗಳನ್ನು ಸಿಂಗರಿಸಿಕೊಂಡು ನಲಿದಾಡಬೇಡವೆ? ಯಾವುದೂ ಕಾಣಿಸುವುದಿಲ್ಲ. ಇದಕ್ಕೇನು ಕಾರಣ?

ಕಂಚುಕಿ—ಅದು ಹೀಗೆ, ಮಹಾಸ್ವಾಮಿ.

ಚಂದ್ರಗುಪ್ತ—ಹೇಗೆ?

ಕಂಚುಕಿ—ಮಹಾಸ್ವಾಮಿ, ಇದು. . . .

ಚಂದ್ರಗುಪ್ತ—ಸ್ಪಷ್ಟವಾಗಿ ಹೇಳು.

ಕಂಚುಕಿ—ಕೌಮುದೀಮಹೋತ್ಸವವನ್ನು ನಿಷೇಧಿಸಿದ್ದಾರಂತೆ.

ಚಂದ್ರಗುಪ್ತ—(ಕೋಪದಿಂದ) ಆ!, ಯಾರು?

ಕಂಚುಕಿ—ಮುಂದಕ್ಕೆ ಅರಿಕೆಮಾಡಲು ಶಕ್ಯವಿಲ್ಲ, ಮಹಾಸ್ವಾಮಿ.

ಚಂದ್ರಗುಪ್ತ—ಪ್ರೇಕ್ಷಕರ ಸಂತೋಷವನ್ನು ಕಳೆದವರು ಆರ್ಯ ಚಾಣಕ್ಯರಲ್ಲ ತಾನೆ?

ಕಂಚುಕಿ—ಮಹಾಸ್ವಾಮಿ, ಜೀವದ ಮೇಲೆ ಆಶೆಯುಳ್ಳ ಬೇರೆ ಯಾರು ಮಹಾಸ್ವಾಮಿಯವರ ಕಟ್ಟಳೆಯನ್ನು ಮೀರಿಯಾರು?

ಚಂದ್ರಗುಪ್ತ—ಶೋಣೋತ್ತರೆ, ನಾನು ಕುಳಿತುಕೊಳ್ಳಬೇಕು.

ಪ್ರತೀಹಾರಿ—ಮಹಾಸ್ವಾಮಿ, ಇಲ್ಲಿಯೇ ಸಿಂಹಾಸನವಿದೆ. (ತೋರಿಸುವಳು.)

(ಚಂದ್ರಗುಪ್ತನು ಕುಳಿತುಕೊಳ್ಳುತ್ತಿರುವನು. ಅಷ್ಟರಲ್ಲಿ ಪರಿವಾರದವರೂ ವಸಂತಕ ಚತುರಕರೂ ಪ್ರವೇಶಿಸುವರು ; ಮೇಳದವರು ಅವರನ್ನು ಹಿಂಬಾಲಿಸುವರು.)

ಚಂದ್ರಗುಪ್ತ—(ಕುಳಿತು) ಜಯಸೇನ, ಆರ್ಯ ಚಾಣಕ್ಯರನ್ನು ನಾನು ನೋಡಬೇಕು.

ಕಂಚುಕಿ—ಅಪ್ಪಣೆ. (ಹೋಗುವನು.)

(ಪರಿವಾರದವರು ಸ್ವಲ್ಪ ಸಂಭ್ರಾಂತರಾಗಿ ನಿಲ್ಲುವರು. ವಸಂತಕನೂ ಚತುರಕನೂ ಒಬ್ಬರ ಮುಖವನ್ನೊಬ್ಬರು ನೋಡುವರು.)

ವಸಂತಕ—(ಚತುರಕನಿಗೆ) ಈ ವಿನೋದಗೋಷ್ಠಿಗೆ ಆ ಗೊಡ್ಡು ವೈದಿಕ ನೇತಕ್ಕೆ ಚತುರಕ ? . . . ಏನೋ ನಡೆದಿದೆ.

ಚತುರಕ—(ವಸಂತಕನಿಗೆ) ಹೌದು. ಈ ದಿನ ನಮಗೆ ಅವಕಾಶ ಸಿಕ್ಕೀತು. ಸ್ವಲ್ಪ ದಿಟ್ಟರಾಗಬೇಕು.

(ಚಂದ್ರಗುಪ್ತನು ಪರಿವಾರವನ್ನು ನಿರೀಕ್ಷಿಸುವನು. ಎಲ್ಲರೂ ವಂದಿಸಿ ಕುಳಿತುಕೊಳ್ಳುವರು.)

ವಸಂತಕ—(ಸ್ವಲ್ಪ ಮುಂದೆ ನಿಂತು) ಮೇಳದವರನ್ನು ಸಜ್ಜುಗೊಳಿಸಿಕೊಂಡು ಬರಲು ಇಷ್ಟು ಹೊತ್ತಾಯಿತು. ಮಹಾಸ್ವಾಮಿಯವರು ಅಪರಾಧ ವನ್ನು ಕ್ಷಮಿಸಬೇಕು.

ಚಂದ್ರಗುಪ್ತ—(ಕೋಪ ಜಿಹಾಸೆಗಳನ್ನು ಪ್ರಕಟಿಸಿ) ಈ ದಿನ ಸಂಗೀತ ಬೇಕಾಗಿಲ್ಲ, ವಸಂತಕ. ಮೇಳದವರನ್ನು ಹಿಂದಕ್ಕೇ ಕಳುಹಿಸಿಬಿಡು.

ವಸಂತಕ—ಮಹಾಸ್ವಾಮಿಯವರು ನನ್ನ ದಿಟ್ಟತನವನ್ನು ಕ್ಷಮಿಸಬೇಕು. ಈ ಬೆಳುದಿಂಗಳಲ್ಲಿ ಸಂಗೀತಕ್ಕೆ ತುಂಬ ಕಳೆಗಟ್ಟುತ್ತಿತ್ತು.

ಚಂದ್ರಗುಪ್ತ—ಮನಸ್ಸಿಗೆ ಹರ್ಷವಿಲ್ಲದಿದ್ದರೆ ಸಂಗೀತವೂ ಬೇಕಾಗುವುದಿಲ್ಲ ; ಬೆಳುದಿಂಗಳೂ ಬೇಕಾಗುವುದಿಲ್ಲ.

ವಸಂತಕ—ಪ್ರಭುಗಳು ಅಪ್ಪಣೆ ಕೊಡಿಸಿದ್ದು ದಿಟ. (ಸುತ್ತಲೂ ನೋಡಿ) ಆದರಿಂದಲೇ ಕೌಮುದೀ ಮಹೋತ್ಸವವನ್ನು ನಿಲ್ಲಿಸಿರುವ ಹಾಗಿದೆ. (ಚಂದ್ರಗುಪ್ತನು ಹುಬ್ಬುಗಂಟಿಕ್ಕುವನು.) ಬೇಸಗೆಯ ಕೊನೆಯಲ್ಲಿ ಮೊದಲ ಗುಡುಗನ್ನು ಕೇಳಿದ ಹಾಗೆ ಉತ್ಸವದ ಮಾತು ಕೇಳಿ ಪುರಜನ ತುಂಬ ಆನಂದಪಟ್ಟಿದ್ದರು.

ಚಂದ್ರಗುಪ್ತ—(ಸುಮ್ಮನಿರುವನು.)

ವಸಂತಕ—(ಧೈರ್ಯವನ್ನು ಮುಂದುವರಿಸಿ) ಮಹಾಸ್ವಾಮಿಯವರಲ್ಲಿ ಒಂದು ಅರಿಕೆ. ಚಿತ್ತಕ್ಲೇಶವನ್ನು ಕೂಡ ಮರಸಿಬಿಡುವ ಶಕ್ತಿ ಸಂಗೀತ ದಲ್ಲಿದೆ. ಎರಡೇ ಕ್ಷಣಕಾಲ ಮಹಾಸ್ವಾಮಿಯವರು ಪರಾಂಬರಿಸ ಬೇಕು.

(ಚಂದ್ರಗುಪ್ತನು ಸುಮ್ಮನಿರುವನು. ವಸಂತಕನ ಸನ್ನೆಯಂತೆ ಮೇಳದವರು ಉತ್ತಮವಾದ ಎರಡು ಮೂರು ಕೃತಿಗಳನ್ನು ಹಾಡಿ ಬಾಜಿಸುವರು. ಮಧ್ಯೆ ಒಂದು ಸಲ ಚಂದ್ರಗುಪ್ತನು, 'ಭೇಷ್' ಎನ್ನುವನು. ಮುಂದೆ ಒಂದು ಕೃತಿ ಅರ್ಧ ಸಾಗಿರು ವಾಗ ನೇಪಥ್ಯದಲ್ಲಿ ಚಾಣಕ್ಯನ ಧ್ವನಿ ಕೇಳಿಸುವುದು. ಚಂದ್ರಗುಪ್ತನು ಥಟ್ಟನೆ, 'ಇನ್ನು ಸಾಕು' ಎಂದು ಕೈ ಬೀಸುವನು. ಮೇಳದವರು ನಿಲ್ಲಿಸಿ ತಮ್ಮ ಪರಿಕರ ಗಳನ್ನೆಲ್ಲಾ ಎತ್ತಿಕೊಂಡು ದೂರಕ್ಕೆ ಸರಿಯುತ್ತಿರುವಾಗ, ನೇಪಥ್ಯದಲ್ಲಿ :)

ಚಾಣಕ್ಯನ ಧ್ವನಿ—ಜಯಸೇನ, ನಾವು ಕೌಮುದೀಮಹೋತ್ಸವವನ್ನು ನಿಲ್ಲಿಸಿದೆವೆಂದು ಯಾರು ಹೇಳಿದರು?

ಕಂಚುಕಿಯ ಧ್ವನಿ—ಪೂಜ್ಯರು ಪ್ರಸನ್ನರಾಗಬೇಕು. ಮಹಾರಾಜರು ಸುಗಾಂಗಪ್ರಾಸಾದಕ್ಕೆ ಬಂದು ಸುತ್ತಲೂ ನೋಡಿ ತಾವೇ ತಿಳಿದು ಕೊಂಡರು.

ಚಾಣಕ್ಯನ ಧ್ವನಿ—ತಾನೇ ತಿಳಿದುಕೊಂಡನೋ! . . . ಆಮೇಲೆ ನೀವೆಲ್ಲಾ ಪ್ರೋತ್ಸಾಹಿಸಿ ಅವನ ಕೋಪವನ್ನು ಕೆರಳಿಸಿದಿರಿ.

(ಕಂಚುಕಿಯ ಧ್ವನಿ ಬರುವುದಿಲ್ಲ.)

ಚಾಣಕ್ಯನ ಧ್ವನಿ—ಈಗ ಚಂದ್ರಗುಪ್ತನು ಎಲ್ಲಿದ್ದಾನೆ?

ಕಂಚುಕಿಯ ಧ್ವನಿ—ಪೂಜ್ಯರು ಹೀಗೆ ದಯಮಾಡಿಸಬೇಕು.

(ಕಂಚುಕಿಯೂ ಚಾಣಕ್ಯನೂ ಪ್ರವೇಶಿಸುವರು. ಎಲ್ಲರೂ ಥಿಗ್ಗನೆ ಎದ್ದುನಿಲ್ಲುವರು.)

ಚಾಣಕ್ಯ—(ಮುಂದೆ ಬಂದು) ವತ್ಸ, ವಿಜಯೀಭವ.

ಚಂದ್ರಗುಪ್ತ—(ಪಾದಗಳಿಗೆ ಬಿದ್ದು) ಆರ್ಯ, ಚಂದ್ರಗುಪ್ತನು ಅಭಿವಂದಿಸು ತ್ತಾನೆ.

ಚಾಣಕ್ಯ—(ಕೈಹಿಡಿದು ಎಬ್ಬಿಸಿ) ಏಳು ವತ್ಸ, ಏಳು. ಸಮುದ್ರಾಂತ ಕ್ಷಿತಿಪತಿ ಯಾಗು.

ಚಂದ್ರಗುಪ್ತ—ಆರ್ಯರ ಪ್ರಸಾದದಿಂದ ಆ ಭಾಗ್ಯವನ್ನು ಅನುಭವಿಸುತ್ತಲೇ ಇದ್ದೇನೆ. ತಾವು ಪೀಠವನ್ನು ಸ್ವೀಕರಿಸಬೇಕು.

(ಚಾಣಕ್ಯ ಚಂದ್ರಗುಪ್ತರು ಕುಳಿತ ಬಳಿಕ ಎಲ್ಲರೂ ಕುಳಿತುಕೊಳ್ಳುವರು.)

ಚಾಣಕ್ಯ—ಚಂದ್ರಗುಪ್ತ, ನಮ್ಮನ್ನು ಕರಸಿದ್ದು ಏತಕ್ಕೆ ?

ಚಂದ್ರಗುಪ್ತ—ಆರ್ಯರ ದರ್ಶನದಿಂದ ಕೃತಾರ್ಥನಾಗುವುದಕ್ಕೆ.

ಚಾಣಕ್ಯ—(ನಸುನಕ್ಕು) ಈ ವಿನಯ ಹಾಗಿರಲಿ. ಪ್ರಭುಗಳು ಅಧಿಕಾರಿಗಳನ್ನು ನಿರರ್ಥಕವಾಗಿ ಕರಸುವುದಿಲ್ಲ.

ಚಂದ್ರಗುಪ್ತ—ಕೌಮುದೀಮಹೋತ್ಸವವನ್ನು ನಿಲ್ಲಿಸಿದ್ದಕ್ಕೆ ಏನು ಫಲ ವುಂಟೆಂದು ಆರ್ಯರಿಗೆ ತೋರುತ್ತದೆ ?

ಚಾಣಕ್ಯ—(ನಸುನಕ್ಕು) ಹಾಗಾದರೆ ನಮ್ಮನ್ನು ಕರಸಿದ್ದು ಆಕ್ಷೇಪಿಸು ವುದಕ್ಕೆ ?

ಚಂದ್ರಗುಪ್ತ—ಶಾಂತಂ ಪಾಪಂ, ಶಾಂತಂ ಪಾಪಂ ! ಅಲ್ಲ, ಅಲ್ಲ, ಗುರುಗಳಲ್ಲಿ ಅರಿಕೆಮಾಡಿಕೊಳ್ಳುವುದಕ್ಕೆ.

ಚಾಣಕ್ಯ—ಹಾಗಿದ್ದರೆ, ಅರಿಕೆಮಾಡಿಕೊಳ್ಳತಕ್ಕ ಶಿಷ್ಯರು ಗುರುಗಳ ಸ್ವತಂತ್ರ ವರ್ತನೆಗೆ ಅಡ್ಡಿಮಾಡಕೂಡದು.

ಚಂದ್ರಗುಪ್ತ—ನಿಜ, ಅದಕ್ಕೆ ಸಂದೇಹವಿಲ್ಲ. ಆದರೆ ಪ್ರಯೋಜನವಿದ್ದ ಹೊರತು ಆರ್ಯರು ಯಾವುದಕ್ಕೂ ಕೈಹಾಕದಿರುವುದರಿಂದ ನನ್ನ ಪ್ರಶ್ನೆಗೆ ಅವಕಾಶ ಹುಟ್ಟಿತು.

ಚಾಣಕ್ಯ—ನೀನು ಗ್ರಹಿಸಿದ್ದು ಸರಿ. ಪ್ರಯೋಜನವಿಲ್ಲದ ಕೆಲಸವನ್ನು ಚಾಣಕ್ಯನು ಸ್ವಪ್ನದಲ್ಲಿ ಕೂಡ ಮಾಡತಕ್ಕವನಲ್ಲ.

ಚಂದ್ರಗುಪ್ತ—ಅದರಿಂದಲೇ, ಕೇಳಬೇಕೆಂಬ ಇಚ್ಛೆ ನನ್ನನ್ನು ಆಡಿಸುತ್ತಿದೆ.

ಚಾಣಕ್ಯ—ಕೇಳು ಹಾಗಾದರೆ. ಪ್ರಭುಸಿದ್ಧಿಯನ್ನು ಅರ್ಥಶಾಸ್ತ್ರಕಾರರು ರಾಜಾಯತ್ತ, ಸಚಿವಾಯತ್ತ, ಉಭಯಾಯತ್ತ ಎಂದು ಮೂರು ಬಗೆಯಾಗಿ ವಿಂಗಡಿಸುತಾರೆ. ಇವುಗಳಲ್ಲಿ ಸಚಿವಾಯತ್ತಸಿದ್ಧಿ ಯುಳ್ಳ ನಿನಗೆ ಈ ಪ್ರಯೋಜನಗಳನ್ನೆಲ್ಲಾ ಹುಡುಕಿಕೊಂಡು ಏನು

ಕೆಲಸ? ಅದು ನಮಗೆ ಕಟ್ಟಿದ್ದು: ನಾವೇ ನೋಡಿಕೊಳ್ಳುತ್ತೇವೆ. ನಿನಗೆ ಬೇಕಾದರೆ ಇಗೋ, ಸಂಗೀತವಿದೆ, ನಾಟ್ಯವಿದೆ.

(ಚಂದ್ರಗುಪ್ತನು ಕೋಪದಿಂದ ಮುಖ ತಿರುಗಿಸಿಕೊಳ್ಳುವನು.)

**ಚತುರಕ**—(ಗಟ್ಟಿಯಾಗಿ ವಾಚಿಸುವನು.)

ಆಕಾಶದೊಳಗೆಲ್ಲ ಕಾಶಕುಸುಮದ ಬಿಳುಪು—
ಹರನ ದೇಹದ ಭಸ್ಮಲೇಪದಂತೆ,
ಮುಗಿಲ ಪಟಲಕೆ ಚಂದ್ರಕಿರಣಜಾಲದ ಹೆಣಿಗೆ—
ಹರನ ಕರಿಚರ್ಮದಾವರಣದಂತೆ,
ಬಿಳಿಯ ನೈದಿಲ ಸಾಲು—ರುಂಡಮಾಲಿಕೆಯಂತೆ,
ಅರಸಂಜೆ—ಅವನಟ್ಟಹಾಸದಂತೆ:
ಇಂತಪೂರ್ವದ ಹರನ ತನುವಿನೊಲು ಶರದವಿದು
ತೊಲಗಿಸಲಿ ನಿಮ್ಮೆಲ್ಲ ಖೇದಗಳನು!

ಅದೆತಾನೆ ರೆಪ್ಪೆತೆರೆದೊಲೆದು, ಮುಂದಣ ರತ್ನ-
ದೀಪಕಾಂತಿಗೆ ನಿಮಿಷಕಾಲ ಬೆದರಿ,
ತನ್ನ ಕೆಲಸವೆ ತನಗೆ ಭಾರ್ವಸಿ, ಆಕಳಿಕೆ-
ವ್ಯೆಮುರಿತವೆಡೆಗೊಳಲು ಹನಿಗೂಡುತ—
ಸುತ್ತುಹೆಡೆ ತಲೆದಿಂಬಸುಳಿದು ಹಾವಿನ ಶಯ್ಯೆ-
ಯಿಂದ ಮೇಲಕೆ ವಿಷ್ಣುವೇಳುತಿರಲು,
ನಿದ್ದೆಹರಿವಿನ ಕೆಂಪು ಮೆರೆವ ಕುಡಿನೋಟವದು
ಕಾಪಿಡಲಿ ಚಿರಕಾಲ ನಿಮ್ಮನೊಸೆದು.

**ವಸಂತಕ**—(ಗಟ್ಟಿಯಾಗಿ ವಾಚಿಸುವನು.)

ಸತ್ತ್ವದುತ್ಕರ್ಷವನು ಶೇಖರಿಸಿ ವಿಧಿಯೊಂದು
ನಿಧಿಯನೆಸಗಿರುವಂತೆ ಕಂಗೊಳಿಸುತ,
ಆತ್ಮತೇಜಶ್ಶಿಖಿಯ ಬೇಗೆ ಮದಧಾರೆಯನು
ಹೀರುತಿರೆ ಸಲಗಗಳನೊಕ್ಕಲಿಕ್ಕಿ

ಗರ್ವದಲಿ ಗಾಡಿಯಲಿ ನಡೆವ ಮೃಗಪತಿ ತನ್ನ
ದಂಷ್ಟ್ರಾಭಿಘಾತವನು ಸೈರಿಸುವುದೆ!
ಅರಸ, ಸಹಿಸುವುದುಂಟೆ ಆಜ್ಞಾವಿಘಾತವನು
ನಿನ್ನ ಮಹಿಮೆಯ ಸಾರ್ವಭೌಮನೃಪರು!

ಉಡಿಗೆ ತೊಡಿಗೆಯನುಟ್ಟು ತೊಟ್ಟು ಮೆರೆದಷ್ಟರೊಳೆ
ಒಡೆಯನೆನಿಸನು ಒಡೆಯನು;
ತಡೆಯದೊಲು ಹೆರರು ತನ್ನಾಜ್ಞೆಯನು ನಿನ್ನಂತೆ
ನಡಸುವನೆ ಒಡೆಯನಹನು!

ಚಾಣಕ್ಯ—(ತನ್ನಲ್ಲಿ) ಮೊದಲನೆಯವನೇನೋ ದೇವತಾಸ್ತುತಿಯ ನೆವದಿಂದ ಈಗ ಒದಗಿರುವ ಶರತ್ಕಾಲದ ವರ್ಣನೆಯನ್ನು ಮಾಡಿದನು. ಎರಡನೆಯವನು? . . . ಆಹಾ, ಇದು ರಾಕ್ಷಸನ ಪ್ರಯೋಗ! ಎಲಾ ರಾಕ್ಷಸ, ಕೌಟಿಲ್ಯನು ಎಚ್ಚತ್ತೇ ಇದ್ದಾನೆ! ನೋಡುವೆಯಂತೆ.

ಚಂದ್ರಗುಪ್ತ—ಜಯಸೇನ, ಈ ವೈತಾಳಿಕರಿಬ್ಬರಿಗೂ ಸಾವಿರ ಸಾವಿರ ಹೊನ್ನುಗಳನ್ನು ಕೊಡಿಸು.

ಕಂಚುಕಿ—ಮಹಾಸ್ವಾಮಿಯವರ ಅಪ್ಪಣೆ. (ಹೊರಡುವನು.)

ಚಾಣಕ್ಯ—(ರೇಗಿ) ಜಯಸೇನ, ನಿಲ್ಲು; ಹೋಗಬೇಡ. ಚಂದ್ರಗುಪ್ತ, ಅಪಾತ್ರದಲ್ಲಿ ಇಷ್ಟೊಂದು ಧನವ್ಯಯವೇತಕ್ಕೆ?

ಚಂದ್ರಗುಪ್ತ—(ಕೋಪದಿಂದ) ಆರ್ಯರು ಹೀಗೆ ಎಲ್ಲೆಲ್ಲೂ ನನ್ನ ಕೈ ತಡೆಯುತ್ತಿದ್ದರೆ ನನಗೆ ಇದು ಬಂಧನವೇ ಹೊರತು ರಾಜ್ಯವಲ್ಲ.

ಚಾಣಕ್ಯ—ಚಂದ್ರಗುಪ್ತ, ತಾವಾಗಿ ರಾಜ್ಯಭಾರಮಾಡದ ರಾಜರಿಗೆ ಈ ಬಗೆಯ ತಡೆಗಳು ಒದಗುತ್ತವೆ. ಇದನ್ನು ಸಹಿಸದಿದ್ದರೆ ಇನ್ನು ಮುಂದೆ ನೀನೇ ಸ್ವಾತಂತ್ರ್ಯವನ್ನು ವಹಿಸಿಕೊ.

ಚಂದ್ರಗುಪ್ತ—ಇಗೊ, ಸ್ವಕರ್ತವ್ಯವನ್ನು ಕೈಕೊಂಡಿದ್ದೇವೆ.

ಚಾಣಕ್ಯ—ಅದು ನಮಗೂ ಇಷ್ಟವೆ. ನಾವೂ ಸ್ವಕರ್ತವ್ಯವನ್ನು ಕೈಕೊಂಡಿದ್ದೇವೆ.

ಚಂದ್ರಗುಪ್ತ—ಹಾಗಾದರೆ ಕೌಮುದೀಮಹೋತ್ಸವವನ್ನು ನಿಲ್ಲಿಸಿದ್ದಕ್ಕೆ ಪ್ರಯೋಜನವನ್ನು ನಾನು ಕೇಳಬೇಕೆಂದಿದ್ದೇನೆ.

ಚಾಣಕ್ಯ—ಕೌಮುದೀಮಹೋತ್ಸವವನ್ನು ನಡಸುವುದಕ್ಕೆ ಪ್ರಯೋಜನ ವನ್ನು ನಾನೂ ಕೇಳಬೇಕೆಂದಿದ್ದೇನೆ.

ಚಂದ್ರಗುಪ್ತ—ಮೊದಲನೆಯದಾಗಿ, ನನ್ನ ಆಜ್ಞೆ ನಾಗತಕ್ಕದ್ದು.

ಚಾಣಕ್ಯ—ಚಂದ್ರಗುಪ್ತ, ನಿನ್ನ ಆಜ್ಞೆ ನಾಗಬಾರದ್ದೇ ಕೌಮುದೀ ಮಹೋತ್ಸವವನ್ನು ನಿಲ್ಲಿಸಿದ್ದರಿಂದ ನನಗೆ ಮೊದಲನೆಯ ಪ್ರಯೋ ಜನ. ಏಕೆಂದರೆ,—ಚತುಸ್ಸಮುದ್ರಮೇಖಲೆಯಾದ ಈ ಭೂಮಂಡ ಲದ ರಾಜರೆಲ್ಲರೂ ನಿನ್ನ ಆಜ್ಞೆಯನ್ನು ಶಿರೋಮಾಲೆಯಂತೆ ಧರಿಸು ತ್ತಾರೆ. ಆ ಆಜ್ಞೆ ನನ್ನ ಬಳಿ ಮಾತ್ರ ತಗ್ಗಿ, ನಿನ್ನ ಪ್ರಭುತ್ವಕ್ಕೆ ವಿನಯವು ಅಲಂಕಾರವೆಂದು ಸಾರುತ್ತದೆಯಲ್ಲವೆ? ಇನ್ನೂ ಬೇರೆ ಪ್ರಯೋಜನವನ್ನು ಕೇಳಿದರೆ ಅದನ್ನೂ ಹೇಳುತ್ತೇನೆ.

ಚಂದ್ರಗುಪ್ತ—ಹೇಳಬೇಕು.

ಚಾಣಕ್ಯ—(ತನ್ನ ಬಳಿಯಿದ್ದ ಒಂದು ಪತ್ರವನ್ನು ತೆಗೆದು) ಚಂದ್ರಗುಪ್ತ, ಇದು ಇಲ್ಲಿಂದ ಭದ್ರಭಟಾದಿಗಳು ಜುಗುಪ್ಸೆಗೊಂಡು ಹೊರಟುಹೋಗಿ ಮಲಯಕೇತುವನ್ನು ಆಶ್ರಯಿಸಿದ ಮೇಲೆ ನನಗೆ ಬರೆದ ಮೊದಲ ನೆಯ ಪತ್ರ. ಇದನ್ನು ನೋಡಿಕೊ.

(ಪ್ರತೀಹಾರಿ ಪತ್ರವನ್ನು ತೆಗೆದುಕೊಂಡು ಚಂದ್ರಗುಪ್ತನಿಗೆ ಕೊಡುವಳು.)

ಚಂದ್ರಗುಪ್ತ—(ಮನಸ್ಸಿನಲ್ಲಿ ಓದಿಕೊಂಡು, ಪ್ರಕಾಶವಾಗಿ) ಆರ್ಯರೆ, ಇದು ತಾನೆ ಪತ್ರ? ಏನು ಗರ್ವ ಇವರಿಗೆ! ಇವರು ಇಲ್ಲಿಂದ ಅಸಮಾಧಾನ ಗೊಂಡು ಹೋದದ್ದಕ್ಕೆ ಕಾರಣವೇನು?

ಚಾಣಕ್ಯ—ಕೇಳು. ನಮ್ಮಲ್ಲಿ ಗಜಾಧ್ಯಕ್ಷನಾಗಿದ್ದ ಭದ್ರಭಟನೂ ಅಶ್ವಾಧ್ಯಕ್ಷ ನಾಗಿದ್ದ ಪುರುಷದತ್ತನೂ ಸ್ತ್ರೀಮದ್ಯಲೋಲರಾಗಿ ತಮ್ಮ ಕಾರ್ಯ ಗಳನ್ನು ಸರಿಯಾಗಿ ನೋಡಿಕೊಳ್ಳುತ್ತಿರಲಿಲ್ಲ; ಆದ್ದರಿಂದ ಅಧಿಕಾರ ವನ್ನು ತಪ್ಪಿಸಿ ಅವರಿಗೆ ಜೀವನಾಂಶವನ್ನು ಮಾತ್ರ ಕಲ್ಪಿಸಿದೆನು. ಅದಕ್ಕಾಗಿ ಅವರು ಮಲಯಕೇತುವಿನ ಬಳಿಗೆ ಹೋಗಿ ಅಲ್ಲಿ

ಸೇನಾಧಿಕಾರವನ್ನು ಸಂಪಾದಿಸಿದ್ದಾರೆ. ಡಿಂಗಿರಾತ ಬಲಗುಪ್ತರಂತೂ ತುಂಬ ಆಸೆಬುರುಕರು. ನೀನು ಕೊಡುತ್ತಿದ್ದ ಸಂಬಳವನ್ನು ಅಲ್ಪವಾಗಿ ಎಣಿಸಿ ಮಲಯಕೇತುವಿನ ಹತ್ತಿರ ಹೆಚ್ಚಾಗಿ ಸಿಕ್ಕುವುದೆಂದು ಹೋಗಿ ಸೇರಿಕೊಂಡಿದ್ದಾರೆ. ನಿನ್ನ ಕುಮಾರಸೇವಕನಾದ ರಾಜಸೇನನೋ! ನಿನ್ನ ಅನುಗ್ರಹದಿಂದ ಒಮ್ಮೆಗೇ ಪಡೆದ ಆನೆ ಕುದುರೆ ಐಶ್ವರ್ಯವೆಲ್ಲವೂ ಒಮ್ಮೆಗೇ ತಪ್ಪಿಹೋಗಬಹುದೆಂದು ಶಂಕಿಸಿ ಮಲಯಕೇತುವಿನ ಬಳಿಗೆ ಓಡಿ ಹೋಗಿದ್ದಾನೆ. ಸೇನಾಪತಿ ಸಿಂಹಬಲನ ತಮ್ಮ ಭಾಗುರಾಯಣನಿದ್ದಾನಲ್ಲ; ಅವನಿಗೂ ಪರ್ವತೇಶ್ವರನಿಗೂ ಹೇಗೋ ಸ್ನೇಹ ಬೆಳೆಯಿತು. ಆದರಿಂದ 'ನಿನ್ನ ತಂದೆಯನ್ನು ಚಾಣಕ್ಯನು ಕೊಲ್ಲಿಸಿದ'ನೆಂದು ಸುಳ್ಳುಸುಳ್ಳಾಗಿ ಮಲಯಕೇತುವನ್ನು ಬೆದರಿಸಿ ಇಲ್ಲಿಂದ ರಹಸ್ಯವಾಗಿ ಕರೆದುಕೊಂಡು ಹೋದನು. ಮಲಯಕೇತುವೂ ಕೂಡ ಅವನನ್ನು ಪ್ರಾಣರಕ್ಷಕನೆಂದು ಭಾವಿಸಿ ಅವನಿಗೆ ಸಚಿವ ಪದವಿಯನ್ನು ಕೊಟ್ಟಿದ್ದಾನೆ. ಇನ್ನುಳಿದವರು ಲೋಹಿತಾಕ್ಷ ವಿಜಯವರ್ಮರು: ಇವರಿಗಂತೂ ತಲೆ ನಿಲ್ಲದಷ್ಟು ಗರ್ವ; ಅವರ ಜ್ಞಾತಿಗಳಿಗೆ ನೀನು ಗೌರವವನ್ನು ದಯಪಾಲಿಸಿದ್ದಕ್ಕೆ ಸಹಿಸಲಾರದೆ ಮಲಯಕೇತುವಿನ ಬಳಿಗೆ ಹೋಗಿದ್ದಾರೆ. ಇದೇ ಇವರೆಲ್ಲರ ಅಸಮಾಧಾನಕ್ಕೆ ಕಾರಣ.

ಚಂದ್ರಗುಪ್ತ—ಈ ರೀತಿ ಅವರ ವೈಮನಸ್ಯಕ್ಕೆ ಕಾರಣಗಳನ್ನು ಆರ್ಯರು ತಿಳಿದಿದ್ದರೂ ಕೂಡಲೆ ಪ್ರತೀಕಾರವನ್ನು ಏಕೆ ಕೈಕೊಳ್ಳಲಿಲ್ಲ?

ಚಾಣಕ್ಯ—ಚಂದ್ರಗುಪ್ತ, ಪ್ರತೀಕಾರ ಸಾಧ್ಯವಾಗಲಿಲ್ಲ.

ಚಂದ್ರಗುಪ್ತ—ಏನು, ಅಚಾತುರ್ಯದಿಂದಲೋ, ಪ್ರಯೋಜನದ ದೃಷ್ಟಿಯಿಂದಲೋ?

ಚಾಣಕ್ಯ—ಅಚಾತುರ್ಯವೆಲ್ಲಿ ಬಂದೀತು? ಪ್ರಯೋಜನದ ದೃಷ್ಟಿಯಿಂದಲೇ.

ಚಂದ್ರಗುಪ್ತ—ಆ ಪ್ರಯೋಜನವನ್ನು ಇನ್ನು ಕೇಳಲು ಬಯಸುತ್ತೇನೆ.

ಚಾಣಕ್ಯ—ಕೇಳಿ ಮಂದಟ್ಟು ಮಾಡಿಕೋ. ಅಧಿಕಾರಿಗಳು ತಿರುಗಿಬಿದ್ದರೆ ಅದಕ್ಕೆ ಪ್ರತೀಕಾರವು ಎರಡು ಬಗೆ; ಒಂದು ಅನುಗ್ರಹ,

ಮತ್ತೊಂದು ನಿಗ್ರಹ. ಅಧಿಕಾರದಿಂದ ತೆಗೆದುಹಾಕಿದ ಭದ್ರಭಟ ಪುರುಷದತ್ತರಿಗೆ ಅನುಗ್ರಹವೆಂದರೆ ಮತ್ತೆ ಅಧಿಕಾರವನ್ನು ವಹಿಸಿಕೊಡುವುದೇ. ವ್ಯಸನಲೋಲರಾದ ಅಂಥ ಅಯೋಗ್ಯರಿಗೆ ಮತ್ತೆ ಅಧಿಕಾರ ಕೊಟ್ಟರೆ, ರಾಜ್ಯಕ್ಕೆ ತಳಹದಿಯಾದ ಗಜಬಲ ತುರಗಬಲವೆಲ್ಲವೂ ಹಾಳಾಗುತ್ತದೆ. ಡಿಂಗಿರಾತ ಬಲಗುಪ್ತರು ಅತಿಲುಬ್ಧರು. ಅವರಿಗೆ ಸಕಲ ರಾಜ್ಯವನ್ನೇ ಕೊಟ್ಟರೂ ತೃಪ್ತಿ ಹುಟ್ಟು ವುದಿಲ್ಲ; ಅನುಗ್ರಹವಿನ್ನು ಹೇಗೆ ಸಾಧ್ಯ? ರಾಜಸೇನನು ತನ್ನ ಸಂಪ ತ್ತೆಲ್ಲ ನಾಶವಾಗುವುದೆಂದು ಹೆದರಿ ಓಡಿಹೋದನು; ಭಾಗುರಾಯಣ ನಂತೂ ಮಲಯಕೇತುವಿನ ಅಭಿಮಾನವನ್ನು ಬಯಸಿ ಅಲ್ಲಿಗೆ ಹೋಗಿ ದ್ದಾನೆ. ಇವರ ವಿಷಯದಲ್ಲಿ ಅನುಗ್ರಹಕ್ಕೆ ದಾರಿಯೆಲ್ಲಿ? ಜ್ಞಾತಿ ಮಾತ್ಸರ್ಯದಿಂದ ಕುದಿಯುತ್ತಿರುವ ಲೋಹಿತಾಕ್ಷ ವಿಜಯವರ್ಮರಿಗೆ ಯಾವ ಅನುಗ್ರಹವನ್ನು ತೋರಿಸಿದರೆ ತಾನೆ ನಮ್ಮಲ್ಲಿ ಒಲವು ಹುಟ್ಟೀತು? ಹೀಗೆ ಅನುಗ್ರಹವು ಅಶಕ್ಯವೆಂದು ತೋರಿಸಿದ್ದಾಯಿತು. ಇನ್ನು ನಿಗ್ರಹದ ವಿಚಾರ. ನಾವು ನಂದರ ಐಶ್ವರ್ಯವನ್ನು ಸಂಪಾದಿ ಸಿದ್ದು ಮೊನ್ನೆ ಮೊನ್ನೆ. ಆಗ ನಮ್ಮ ಪಕ್ಷವನ್ನು ವಹಿಸಿ ಸಹಾಯ ಮಾಡಿದ ಮುಖ್ಯಾಧಿಕಾರಿಗಳಿಗೆಲ್ಲಾ ಕಠಿನ ಶಿಕ್ಷೆಯನ್ನು ವಿಧಿಸಿ ಹಿಂಸೆಪಡಿಸಿದರೆ, ನಂದಕುಲಾಭಿಮಾನಿಗಳಾದ ಅಧಿಕಾರಿಗಳಿಗೂ ಪ್ರಜೆಗಳಿಗೂ ನಮ್ಮಲ್ಲಿ ಮತ್ತಷ್ಟು ಅಪನಂಬಿಕೆ ಹುಟ್ಟುವುದು. ಆದ್ದ ರಿಂದ ನಿಗ್ರಹವೂ ಸಾಧ್ಯವಲ್ಲ. ಈ ನಡುವೆ ಈ ರೀತಿಯಾಗಿ ನಮ್ಮ ಪಕ್ಷ ದವರನ್ನು ಮಲಯಕೇತು ಸೇರಿಸಿಕೊಂಡದ್ದು ಮಾತ್ರವೇ ಅಲ್ಲ; ರಾಕ್ಷಸನು ಬೇರೆ ಅಲ್ಲಿ ಹೊಕ್ಕು ಅವನಿಗೆ ಉಪದೇಶ ಮಾಡುತ್ತಾ ಬೆನ್ನು ತಟ್ಟುತ್ತಿದ್ದಾನೆ. ಇದರಿಂದ ಅವನು ಹುರಿದುಂಬಿ ತನ್ನ ತಂದೆಯ ಮರಣದ ಸೇಡನ್ನು ತೀರಿಸಿಕೊಳ್ಳಬೇಕೆಂದು ದೊಡ್ಡ ಮ್ಲೇಚ್ಛ ಸೈನ್ಯ ದೊಂದಿಗೆ ನಮ್ಮ ಮೇಲೆ ದಂಡೆತ್ತಿ ಬರಬೇಕೆಂದಿದ್ದಾನೆ. ಆದ್ದರಿಂದ ಇದು ವ್ಯಾಯಾಮಕಾಲವೇ ಹೊರತು ಉತ್ಸವಕಾಲವಲ್ಲ. ದುರ್ಗ ವನ್ನು ಭದ್ರಪಡಿಸುವ ಹೊತ್ತಿನಲ್ಲಿ ಕೌಮುದೀಮಹೋತ್ಸವಕ್ಕೆ ಅವ ಕಾಶವಿಲ್ಲವೆಂದು ಅದನ್ನು ನಿಲ್ಲಿಸಿದ್ದಾಯಿತು.

ಚಂದ್ರಗುಪ್ತ– ಆರ್ಯರೇ, ಇಲ್ಲಿ ಕೇಳತಕ್ಕದ್ದು ಬಹಳವಿದೆ.

ಚಾಣಕ್ಯ—ಚಂದ್ರಗುಪ್ತ, ನಿಶ್ಶಂಕೆಯಿಂದ ಕೇಳು; ನಾನು ಹೇಳತಕ್ಕದ್ದೂ ಬಹಳವಿದೆ.

ಚಂದ್ರಗುಪ್ತ—ಆ ಮಲಯಕೇತು ನಮ್ಮ ಜೊತೆಯಲ್ಲಿದ್ದಾಗಲೇ ನಮ್ಮ ಅಧಿಕಾರಿಗಳ ಮನಸ್ಸನ್ನು ಹೇಗೆ ಒಳಗೊಳಗೇ ಒಲಿಸಿಕೊಂಡಿದ್ದಾನೆ! ಜೊತೆಗೆ, ನಮ್ಮ ಮೇಲೆ ತನ್ನ ತಂದೆಯ ಕೊಲೆಯ ಅಪವಾದವನ್ನು ಬೇರೆ ಹೊರಿಸಿದ್ದಾನೆ! ಈ ಎಲ್ಲ ಅನರ್ಥಕ್ಕೂ ಮೂಲಕಾರಣವಾದ ಅವನು ಇಲ್ಲಿಂದ ತಪ್ಪಿಸಿಕೊಂಡು ಹೋದಾಗ ಏಕೆ ಉಪೇಕ್ಷಿಸಿಬಿಟ್ಟಿರಿ?

ಚಾಣಕ್ಯ—ಉಪೇಕ್ಷಿಸದೆ ಹೋಗಿದ್ದರೆ, ನಿಗ್ರಹಿಸಬೇಕಾಗಿತ್ತು; ಇಲ್ಲವೇ, ಮಾತುಕೊಟ್ಟಿದ್ದ ಅರ್ಧರಾಜ್ಯವನ್ನು ಸಲ್ಲಿಸಬೇಕಾಗಿತ್ತು. ನಿಗ್ರಹಿಸಿದ್ದ ಪಕ್ಷದಲ್ಲಿ, ಪರ್ವತಕನನ್ನು ಕೊಲ್ಲಿಸಿದ ಕೃತಘ್ನರು ನಾವೆಂಬ ಆರೋಪಣೆಗೆ ನಾವೇ ಕೈಯೊಡ್ಡಿದಂತಾಗುತ್ತಿತ್ತು. ಪರ್ವತಕನು ಅನಾಯಾಸವಾಗಿ ಸತ್ತಿರುವಾಗಲೂ ಅವನ ಮಗನಿಗೆ ಅರ್ಧರಾಜ್ಯವನ್ನು ಸಲ್ಲಿಸಿದ್ದರೆ ತಾನಾಗಿ ಬಂದ ಪೂರ್ಣರಾಜ್ಯಲಕ್ಷ್ಮಿಯನ್ನು ನಾವೇ ನೂಕಿದಂತಾಗುತ್ತಿತ್ತು. ಆದ್ದರಿಂದ ಮಲಯಕೇತು ತಪ್ಪಿಸಿಕೊಂಡು ಹೋದನೆಂದು ಗೊತ್ತಾದರೂ ಉಪೇಕ್ಷಿಸಿದೆವು.

ಚಂದ್ರಗುಪ್ತ—ಇದರ ವಿಷಯ ಹೀಗಾಯಿತು. ರಾಕ್ಷಸನು ಈ ನಗರದಲ್ಲೇ ಇದ್ದಾಗ ಆರ್ಯರು ಉಪೇಕ್ಷಿಸಿದಿರಷ್ಟೆ. ಇದಕ್ಕೆ ಸಮಾಧಾನವೇನು?

ಚಾಣಕ್ಯ—ರಾಕ್ಷಸನು ಸ್ವಾಮಿನಿಷ್ಠ; ಈ ನಗರದಲ್ಲಿ ಹಿಂದಿನಿಂದ ವಾಸವಾಗಿದ್ದವನು. ಅವನ ಶೀಲವನ್ನರಿತುಕೊಂಡು ನಂದಾಭಿಮಾನಿಗಳಾದ ಪ್ರಜೆಗಳೂ ಅಧಿಕಾರಿಗಳೂ ಅವನಲ್ಲಿ ಅತ್ಯಂತ ವಿಶ್ವಾಸಿಗಳಾಗಿದ್ದರು. ಅಲ್ಲದೆ ಅವನು ಪ್ರಜ್ಞಾಶಾಲಿ, ಪ್ರಯತ್ನಶೀಲ; ಜೊತೆಗೆ ಇಲ್ಲಿ ಅವನಿಗೆ ಸಹಾಯವಿತ್ತು, ಸಂಪತ್ತಿಯಿತ್ತು. ಇಂಥವನು ಈ ನಗರದಲ್ಲಿಯೇ ಉಳಿದಿದ್ದರೆ ಒಳಗೊಳಗೇ ದೊಡ್ಡ ದಂಗೆಯನ್ನು ಎತ್ತಿಕಟ್ಟುತ್ತಿದ್ದನು. ದೂರದಲ್ಲಿ ಇಟ್ಟರೆ ಹೊರಗಡೆ ಗಲಭೆಯನ್ನು ಎಬ್ಬಿಸಿ

ವರೂ ಅವನನ್ನು ಉಪಾಯವಾಗಿ ಹೇಗಾದರೂ ವಶಮಾಡಿಕೊಳ್ಳು ವುದು ಸಾಧ್ಯವೆಂದು ಆಲೋಚಿಸಿ, ಎದೆಗೆ ನಟ್ಟ ಬಾಣವನ್ನು ಕಿತ್ತು ಹಾಕುವಂತೆ ಅವನನ್ನು ದೂರ ಮಾಡಿಧೆವು.

ಚಂದ್ರಗುಪ್ತ—ಆರ್ಯರೇ, ಅವನನ್ನು ಪೌರುಷದಿಂದ ಏಕೆ ಹಿಡಿಯಲಿಲ್ಲ?

ಚಾಣಕ್ಯ—ರಾಕ್ಷಸನಲ್ಲವೇ ಅವನು! ಪೌರುಷದಿಂದ ಹಿಡಿಯಹೋದರೆ ನಿನ್ನ ಸೇನೆಯ ಬಹು ಭಾಗವನ್ನು ಅವನು ನಾಶಮಾಡಬಹುದು; ತಾನಾದರೂ ನಾಶಹೊಂದಬಹುದು. ಈ ಎರಡರಲ್ಲಿ ಯಾವುದು ನಡೆದರೂ ಹಾನಿಯೇ ಸರಿ. ನೋಡು: ಅವನು ಯುದ್ಧದಲ್ಲಿ ಮಡಿ ದರೆ ಅಂಥ ಪುರುಷನು ಮತ್ತೆ ನಮಗೆಲ್ಲಿ ದೊರೆತಾನು? ನಿನ್ನ ಸೇನಾ ವೀರರು ಹತರಾದರೂ ನಮಗೆ ಹಾನಿಯೇ. ಆದ್ದರಿಂದ ಕಾಡಾನೆ ಯನ್ನು ಹಿಡಿಯುವಂತೆ ಉಪಾಯದಿಂದಲೇ ಅವನನ್ನು ದಾರಿಗೆ ತರಬೇಕು.

ಚಂದ್ರಗುಪ್ತ—ಬುದ್ಧಿಯಲ್ಲಿ ಆರ್ಯರನ್ನು ನಾವು ಸರಿಗಟ್ಟಲಾರೆವು. ಆದರೆ ಈ ಸಂದರ್ಭದಲ್ಲಿ ಅಮಾತ್ಯ ರಾಕ್ಷಸನೇ ಶ್ಲಾಘ್ಯನೆಂದು ತೋರುತ್ತದೆ.

ಚಾಣಕ್ಯ—(ಕೆರಳಿ) 'ನೀನಲ್ಲ' ಎಂದು ಈ ಮಾತಿಗೆ ಸೇರಿಸಿಕೊಳ್ಳಬೇಕಲ್ಲವೆ! ಚಂದ್ರಗುಪ್ತ, ಅವನು ಮಾಡಿದ್ದೇನು?

ಚಂದ್ರಗುಪ್ತ—ಕೇಳಬೇಕು. ನಮಗೆ ನಗರವು ವಶವಾದಮೇಲೂ ಆ ಮಹಾತ್ಮನು ತನ್ನ ಇಚ್ಛೆ ಬಂದಷ್ಟು ದಿನ ನಮ್ಮ ಕತ್ತು ಮೆಟ್ಟಿದಂತೆ ಇಲ್ಲೇ ಇದ್ದನು. ನಾವು ವಿಜೇತರಾದ ಮೇಲೂ ನಮ್ಮ ಪಕ್ಷದವ ರನ್ನು ಕೊಲ್ಲಿಸಿದನು. ಅವನ ನೀತಿನೈಪುಣ್ಯದಿಂದ ನಮಗೆ ದಿಕ್ಕು ತೋರದೆ, ನಮ್ಮ ಕಡೆಯವರಲ್ಲಿ ವಿಶ್ವಾಸಾರ್ಹರನ್ನು ಕೂಡ ನಂಬು ವುದಕ್ಕೆ ಹಿಂಜರಿಯುತ್ತಿದ್ದೇವೆ.

ಚಾಣಕ್ಯ—(ಕೋಪದಿಂದ ನಕ್ಕು) ರಾಕ್ಷಸನು ಇದನ್ನೋ ಮಾಡಿದ್ದು? ನಾನು ತಿಳಿದುಕೊಂಡೆ: ನಂದರನ್ನು ಎತ್ತಿಹಾಕಿದಂತೆ ನಿನ್ನನ್ನು ಎತ್ತಿಹಾಕಿ, ನಿನ್ನನ್ನು ರಾಜ್ಯದಲ್ಲಿ ಸ್ಥಾಪಿಸಿದಂತೆ ಮಲಯಕೇತು ವನ್ನು ರಾಕ್ಷಸನು ಸ್ಥಾಪಿಸಿದನೋ ಏನೋ ಎಂದು.

ಚಂದ್ರಗುಪ್ತ—ಅದನ್ನೆಲ್ಲಾ ಮಾಡಿದವರು ಬೇರೆ; ಅದರಲ್ಲಿ ಆರ್ಯರದೇನುಂಟು?

ಚಾಣಕ್ಯ—ಎಲೈ ಮಾತ್ಸರ್ಯಶಾಲಿ, ಬೇರೆ ಯಾರು ಮಾಡಿದವರು? ಶತ್ರು ಕುಲವನ್ನೇ ನಿರ್ಮೂಲ ಮಾಡಿದ ಹೊರತು ಕೋಪದಲ್ಲಿ ಬಿಚ್ಚಿ ಹೋದ ಶಿಖೆಯನ್ನು ಕಟ್ಟುವುದಿಲ್ಲವೆಂದು ಬಹಿರಂಗವಾಗಿ ಪ್ರತಿಜ್ಞೆಯನ್ನು ತೊಟ್ಟು, ನವಕೋಟಿನಿಧೀಶ್ವರರಾದ ಆ ಅಹಂಕಾರಿಗಳನ್ನು—ಆ ನಂದರನ್ನು—ಈ ರಾಕ್ಷಸನ ಕಣ್ಣ ಮುಂದೆಯೇ ಯಜ್ಞಪಶುಗಳಂತೆ ಒಬ್ಬನ ಹಿಂದೆ ಒಬ್ಬನನ್ನು ಕೊಲ್ಲಿಸಿದವರು ಬೇರೆ ಯಾರು?

ಚಂದ್ರಗುಪ್ತ—ಇದೆಲ್ಲ ನಡೆದದ್ದು ಬೇರೆಯವರಿಂದ.

ಚಾಣಕ್ಯ—ಆ! ಯಾರಿಂದ?

ಚಂದ್ರಗುಪ್ತ—ನಂದಕುಲಶತ್ರುವಾದ ದೈವದಿಂದ.

ಚಾಣಕ್ಯ—ದೈವವನ್ನು ಮೂರ್ಖರು ನೆಚ್ಚುವರು.

ಚಂದ್ರಗುಪ್ತ—ಆತ್ಮಸ್ತುತಿಯನ್ನು ವಿದ್ವಾಂಸರು ಮಾಡಿಕೊಳ್ಳರು.

ಚಾಣಕ್ಯ—(ರೇಗಿ) ಚಂದ್ರಗುಪ್ತ, ಭೃತ್ಯನಂತೆ ನನ್ನನ್ನು ಆಡಿಸುತ್ತಿದ್ದೀಯೆ. ಕಟ್ಟಿದ ಶಿಖೆಯನ್ನು ಮತ್ತೆ ಕೆದರುವುದಕ್ಕೆ ಈ ಕೈ ಹರಿಯುತ್ತಿದೆ. (ಭೂಮಿಯನ್ನು ಪಾದದಿಂದ ಘಟ್ಟಿಸಿ) ಮತ್ತೆ ಪ್ರತಿಜ್ಞೆಯನ್ನು ಹೂಡುವುದಕ್ಕೆ ಈ ಪಾದ ಕಂಪಿಸುತ್ತಿದೆ. ನಂದವಿನಾಶದಿಂದ ಶಾಂತವಾಗಿದ್ದ ನನ್ನ ಕ್ರೋಧಾಗ್ನಿಯನ್ನು ನೀನು ವಿಧಿವಶನಾಗಿ ಮತ್ತೆ ಕನಲಿಸುತ್ತಿದ್ದೀಯೆ.

ಚಂದ್ರಗುಪ್ತ—(ಆಕುಲಿತನಾಗಿ, ತನ್ನಲ್ಲಿ) ಇದೇನು, ಆರ್ಯರಿಗೆ ಸತ್ಯವಾಗಿಯೂ ಕೋಪ ಬಂದಿರಬಹುದೆ? . . . .

ಚಾಣಕ್ಯ—(ಕೃತಕ ಕೋಪವನ್ನಿಳಿಸಿ) ಚಂದ್ರಗುಪ್ತ, ಚಂದ್ರಗುಪ್ತ, ಮಾತಿಗೆ ಮಾತು ಜೋಡಿಸುವುದು ಸಾಕು. ನಮಗಿಂತ ರಾಕ್ಷಸನೇ ಶ್ರೇಷ್ಠನೆಂದು ತೋರಿದ ಮೇಲೆ ಈ ಸಚಿವಶಸ್ತ್ರವನ್ನು ಅವನಿಗೇ ಕೊಡಬಹುದು. (ಶಸ್ತ್ರವನ್ನು ನೆಲಕ್ಕೆ ಒಗೆದು ಎದ್ದು ಹೋಗುತ್ತಾ, ತನ್ನಲ್ಲಿ) ರಾಕ್ಷಸ, ರಾಕ್ಷಸ, ಚಾಣಕ್ಯನು ಕೈಬಿಟ್ಟರೆ ಚಂದ್ರಗುಪ್ತನನ್ನು ಸುಲಭದಲ್ಲಿ ಗೆಲ್ಲಬಹುದೆಂದು ಈ ಭೇದವನ್ನು ಪ್ರಯೋಗಿಸಿದೆಯಲ್ಲವೆ?

ಇದೇ ನಿನ್ನ ಅವನತಿಗೆ ಕಾರಣವಾಗುವುದನ್ನು ಕಾದುಕೊಂಡಿರು. (ಹೋಗುವನು.)

ಚಂದ್ರಗುಪ್ತ—ಜಯಸೇನ, ಇಂದು ಮೊದಲುಗೊಂಡು ಚಾಣಕ್ಯನನ್ನು ಅಪೇಕ್ಷಿಸದೆ ಚಂದ್ರಗುಪ್ತನೇ ಸ್ವತಃ ರಾಜ್ಯಭಾರ ಮಾಡುವನೆಂದು ಅಧಿಕಾರಿಗಳಿಗೆ ತಿಳಿಯಪಡಿಸು.

ಕಂಚುಕಿ—(ತನ್ನಲ್ಲಿ) ಏನು? ಬರಿಯ 'ಚಾಣಕ್ಯ'; 'ಆರ್ಯ ಚಾಣಕ್ಯ'ರಲ್ಲ! ಅಧಿಕಾರ ಹಾಗಾದರೆ ಕೈಬಿಟ್ಟು ಹೋಯಿತು. . . .

ಚಂದ್ರಗುಪ್ತ—ಆರ್ಯ, ಏನು ಯೋಚನೆ ಮಾಡುತ್ತಿದ್ದೀಯೆ?

ಕಂಚುಕಿ—ಮಹಾಸ್ವಾಮಿ, ಏನೂ ಇಲ್ಲ. ಭಾಗ್ಯವಿಶೇಷದಿಂದ ಮಹಾಸ್ವಾಮಿಯವರು ಈಗ ಮಹಾಸ್ವಾಮಿಯವರೇ ಆದಿರಿ.

ಚಂದ್ರಗುಪ್ತ—(ತನ್ನಲ್ಲಿ) ಇವರೆಲ್ಲಾ ಹೀಗೆಯೇ ಭಾವಿಸಿಕೊಳ್ಳಲಿ; ಇದರ ಮೂಲಕವೇ ಆರ್ಯರ ಅಭೀಷ್ಟವು ಸಿದ್ಧಿಸಲಿ. (ಪ್ರಕಾಶವಾಗಿ) ಶೋಣೋತ್ತರೆ, ಈ ಶುಷ್ಕ ಕಲಹದಿಂದ ನನಗೆ ತಲೆನೋವುಂಟಾಗಿದೆ. ಶಯನಗೃಹದ ಮಾರ್ಗವನ್ನು ತೋರಿಸು.

ಪ್ರತೀಹಾರಿ—ಮಹಾಸ್ವಾಮಿಯವರು ದಯಮಾಡಿಸಬೇಕು.

ಚಂದ್ರಗುಪ್ತ—(ತನ್ನಲ್ಲಿ) ಆರ್ಯರ ಅಪ್ಪಣೆಯಂತೆಯೇ ನಾನು ಮರ್ಯಾದೆ ಮೀರಿ ಮಾತಾಡಿದ್ದು; ಇಷ್ಟಕ್ಕೇ ನನ್ನ ಮನಸ್ಸು ನಾಚಿ ಭೂಮಿಗೆ ಇಳಿದುಹೋಗಿದೆಯಲ್ಲ: ಗುರುಗಳಿಗೆ ನಿಜವಾಗಿಯೂ ಎದುರು ಬಿದ್ದವರ ಮನಸ್ಸು ನಾಚಿಕೆಯಿಂದ ಹೋಳಾಗದೆ ಹೇಗಿದ್ದೀತು? (ಹೊರಟುಹೋಗುವನು. ಪರಿವಾರವೂ ಹಿಂಬಾಲಿಸುವುದು.)

ಚತುರಕ—(ವಸಂತಕನಿಗೆ) ಕಡೆಗೂ ಆ ಧೂರ್ತ ನಮಗೆ ಪಾರಿತೋಷಿಕವನ್ನು ತಪ್ಪಿಸಿಯೇ ಬಿಟ್ಟನಲ್ಲ!

ತೆರೆ.

*

*

# ನಾಲ್ಕನೆಯ ಅಂಕ

## ದೃಶ್ಯ : ೧

(ಮಲಯಕೇತುವಿನ ರಾಜಧಾನಿ : ಮಲಯಕೇತುವಿನ ಅರಮನೆಯಿಂದ ರಾಕ್ಷಸನ ಭವನಕ್ಕೆ ಹೋಗುವ ದಾರಿ. ಕೈಯಲ್ಲಿ ದಂಡವನ್ನು ಧರಿಸಿ ಚಾರನು ಕೂಗುತ್ತಾ ಬರುವನು.)

ಚಾರ—ದಾರಿ, ದಾರಿ! ಮಲಯಕೇತುಕುಮಾರರು ಬಿಜಯಮಾಡಿಸುತ್ತಿದ್ದಾರೆ! ದಾರಿ! (ಮುಂದೆ ನಡೆಯುವನು.)

(ಮಲಯಕೇತುವೂ ಭಾಗುರಾಯಣನೂ ಪ್ರವೇಶಿಸುವರು.)

ಮಲಯಕೇತು—ಭಾಗುರಾಯಣ, ನಮ್ಮ ಕಂಚುಕಿ ಇಷ್ಟೇಕೆ ತಡಮಾಡುತ್ತಿದ್ದಾನೆ? ಅಮಾತ್ಯ ರಾಕ್ಷಸರ ಸಮಯವನ್ನು ನೋಡಿಕೊಂಡು ಬರುವುದಕ್ಕೆ ಇಷ್ಟು ಹೊತ್ತಾಗಬೇಕೆ? ಅವರಿಗೆ ಶಿರೋವೇದನೆಯೆಂದು ಕೇಳಿದ ಕ್ಷಣದಿಂದಲೂ ನನ್ನ ಮನಸ್ಸು ಅವರನ್ನು ನೋಡುವುದಕ್ಕೆ ತಳಮಳಿಸುತ್ತದೆ.

ಭಾಗುರಾಯಣ—ಇಷ್ಟು ತ್ವರೆಪಟ್ಟರೆ ಹೇಗೆ, ಕುಮಾರ? ಕಂಚುಕಿಯನ್ನು ಕಳುಹಿಸಿದ್ದೇ ತಡ, ನಾವೂ ನಿನ್ನ ಆತುರದಿಂದ ಹೊರಟೇ ಬಂದೆವಲ್ಲ! ಈ ವೇಳೆಗೆ ಆತನು ಹಿಂದಿರುಗುತ್ತಿರಬಹುದು.

ಮಲಯಕೇತು—(ನಕ್ಕು) ಹೌದು, ನನ್ನ ಸ್ವಭಾವವೇ ಹೀಗೆ. (ಹಿಂದಿರುಗಿ ನೋಡಿ) ಓಹೋ, ಪರಿವಾರದವರೆಲ್ಲಾ ಹಿಂಬಾಲಿಸಿ ಬರುತ್ತಿದ್ದಾರೆ! ಭಾಗುರಾಯಣ, ನಮ್ಮ ಜೊತೆಯಲ್ಲಿ ಇವರು ಏತಕ್ಕೆ?

ಭಾಗುರಾಯಣ—ನಿಜ. ಇವರೆಲ್ಲರೂ ಬಂದರೆ, ಕಲಕಲದಿಂದ ಅಮಾತ್ಯರ ತಲೆನೋವು ಮತ್ತಷ್ಟು ಹೆಚ್ಚೀತು.

ಮಲಯಕೇತು—ಅಷ್ಟೇ ಅಲ್ಲ. ನಾನು ಅನಿರೀಕ್ಷಿತವಾಗಿ ಕಂಡು ಅಮಾತ್ಯರನ್ನು ಆಹ್ಲಾದಪಡಿಸುವುದೂ ತಪ್ಪಿಹೋಗುತ್ತದೆ. ಪರಿವಾರದವರು ಹಿಂದಿರುಗುವಂತೆ ಈ ಚಾರನ ಮೂಲಕ ಹೇಳಿ ಕಳುಹಿಸು.

ಭಾಗುರಾಯಣ—ಅಪ್ಪಣೆ. ಎಲಾ . . .

(ಅಷ್ಟರಲ್ಲಿ ಭದ್ರಭಟನು ಪ್ರವೇಶಿಸುವನು.)

ಭಾಗುರಾಯಣ—(ಅವನನ್ನು ಕಂಡು) ಕುಮಾರ, ಇಗೋ ಭದ್ರಭಟನೇ ಬಂದನು. . . . ಭದ್ರಭಟ, ಕುಮಾರನು ಅಮಾತ್ಯರ ಬಳಿಗೆ ಒಬ್ಬನೇ ಹೋಗಬೇಕೆಂದು ಅಪೇಕ್ಷಿಸುತ್ತಾನೆ. ನೀವೆಲ್ಲರೂ ಇಷ್ಟುದೂರ ಹಿಂಬಾಲಿಸಿ ಆಯಾಸಪಟ್ಟದ್ದು ಸಾಕು ಎಂದು ಹೇಳುತ್ತಾನೆ. ಸಮೀಪಿಸುತ್ತಿರುವ ಪರಿವಾರವನ್ನೆಲ್ಲಾ ಹಿಂದಿರುಗಿಸಬಹುದಷ್ಟೆ!

ಭದ್ರಭಟ—(ಮಲಯಕೇತುವಿನ ಕಡೆಗೆ ಸ್ವಲ್ಪ ತಿರುಗಿ) ಕುಮಾರನ ಅಪ್ಪಣೆ. ನಾವು ಕುಸುಮಪುರದಿಂದ ಬಂದವರಾದರೂ ನಿನ್ನ ಆಶ್ರಯವನ್ನು ಪಡೆದದ್ದು ಸೇನಾಪತಿ ಶಿಖರಸೇನನ ಮೂಲಕ; ಅಮಾತ್ಯರಾಕ್ಷಸನ ಮೂಲಕವಲ್ಲ. ಆದ್ದರಿಂದ ಈಗ ನಾವು ಆತನನ್ನು ಕಾಣಬೇಕಾಗಿಲ್ಲ. ಇದೋ ಹಿಂದಿರುಗುತ್ತೇವೆ. (ಹಿಂದಿರುಗುವನು. ಚಾರನೂ ಹಿಂಬಾಲಿಸುವನು.)

ಮಲಯಕೇತು—(ಸ್ವಲ್ಪ ಆಲೋಚಿಸಿ) ಭಾಗುರಾಯಣ, ಭದ್ರಭಟನ ಮಾತನ್ನು ಗಮನಿಸಿದೆಯ? ನಾನು ಎಷ್ಟು ಯೋಚಿಸಿದರೂ ಅದರ ಅಭಿಪ್ರಾಯ ನನಗೆ ಹೊಳೆಯಲಿಲ್ಲ; ಅವನ ಮಾತಿಗೆ ಅರ್ಥವೇನಿರಬಹುದು?

ಭಾಗುರಾಯಣ—(ಸ್ವಲ್ಪ ಚಿಂತಿಸಿದಂತೆ ನಟಿಸಿ) ಅರ್ಥವೇನೂ ಅಷ್ಟು ಗಹನವಾಗಿ ತೋರುವುದಿಲ್ಲ. ಪ್ರಭುವನ್ನು ಆತನಿಗೆ ಅತ್ಯಂತ ಪ್ರಿಯನೂ ಹಿತಕರನೂ ಆದವನ ಮೂಲಕ ಆಶ್ರಯಿಸುವುದು ನ್ಯಾಯವೇ ತಾನೆ?

ಮಲಯಕೇತು—ಅಮಾತ್ಯರಾಕ್ಷಸನು ನಮಗೆ ಅತ್ಯಂತ ಪ್ರಿಯನಲ್ಲವೆ, ಹಿತಕರನಲ್ಲವೆ? ನಮ್ಮ ತಂದೆ ಕೂಡ ಈತನಲ್ಲಿ ಪ್ರಬಲ ವಿಶ್ವಾಸವನ್ನಿಟ್ಟಿದ್ದನು.

ಭಾಗುರಾಯಣ—ಹೌದು, ನಿಜ. ಆದರೂ ಅಮಾತ್ಯರಿಗೆ ಚಾಣಕ್ಯನಲ್ಲಿ ಬದ್ಧವೈರವೇ ಹೊರತು ಚಂದ್ರಗುಪ್ತನಲ್ಲಿ ಅಷ್ಟು ಇಲ್ಲ.

ಮಲಯಕೇತು—ಇದೇನು, ಹೀಗೆ ಹೇಳುತ್ತೀಯೆ? ಕುಲವಿನಾಶಕನೆಂದು ಅವನ ಮೇಲೆ ಅಮಾತ್ಯನು ವಿಷ ಕಾರುತ್ತಿಲ್ಲವೆ? ಅವನನ್ನು ಕೊಲ್ಲಬೇಕೆಂದೇ ಅಲ್ಲವೆ ನಮ್ಮ ಪಕ್ಷವನ್ನು ವಹಿಸಿರುವುದು?

ಭಾಗುರಾಯಣ—ಅವನು ನಂದಕುಲವಿನಾಶಕನೆನ್ನುವುದೇನೋ ನಿಜ; ಆದರೆ

ಅವನೂ ಅದೇ ಕುಲದವನಲ್ಲವೆ? ಇದರ ಮೇಲೆ, ಜ್ಞಾತಿಮತ್ಸರ ಹಾಗೆ ಮಾಡಿಸಿತೆಂದು ಅಮಾತ್ಯರಿಗೆ ತಿಳಿಯದೆ? ಇಷ್ಟಕ್ಕೂ ಚಂದ್ರಗುಪ್ತನು ಕುಣಿದದ್ದು ಚಾಣಕ್ಯನ ಬೆಂಬಲದಿಂದ; ನಂದವಧೆಗೆ ಚಾಣಕ್ಯನೇ ಕರ್ತೃ.

ಮಲಯಕೇತು—ನೀನು ಹೇಳುವುದು ನ್ಯಾಯ. ಪೂರ್ವದ ಅಭಿಮಾನ ಎಲ್ಲಿ ಬಿಟ್ಟೀತು? ಒಂದಲ್ಲ ಒಂದು ಸಲ ಕರುಳು ಬಾಧಿಸಿಯೇ ಬಾಧಿಸುತ್ತದೆ.

ಭಾಗುರಾಯಣ—ಈಗ ಚಾಣಕ್ಯನು ವಿಜಯದಿಂದ ಕೊಬ್ಬಿಹೋಗಿದ್ದಾನೆ. ಅವನ ಔದ್ಧತ್ಯವನ್ನು ಸಹಿಸದೆ ಚಂದ್ರಗುಪ್ತನು ಅವನ ಸಚಿವ ಪದವಿಯನ್ನು ಕಿತ್ತುಹಾಕಬಹುದು. ಆಗ, ಎಷ್ಟಾದರೂ ಚಂದ್ರಗುಪ್ತನೂ ಅದೇ ವಂಶದವನೇ; ಅವನ ರಾಜ್ಯದಲ್ಲಿ ತನ್ನ ಆಪ್ತರೂ ಇದ್ದಾರೆ—ಎಂದು ಅಮಾತ್ಯ ರಾಕ್ಷಸನು ಆಲೋಚಿಸಿ ಅವನ ಸಂಗಡ ಸಂಧಿಯನ್ನು ಪ್ರಸ್ತಾವಿಸಬಹುದು. ಚಂದ್ರಗುಪ್ತನೂ ಕೂಡ, ಈತನು ವಂಶಪಾರಂಪರ್ಯವಾಗಿ ಬಂದ ನಮ್ಮ ಮಂತ್ರಿಯೆಂದು ಆಲೋಚಿಸಿ ಸಂಧಿಗೆ ಒಪ್ಪಬಹುದು. ಒಂದು ವೇಳೆ ಹೀಗಾಗಿಬಿಟ್ಟರೆ, ಕುಸುಮಪುರದಿಂದಲೇ ಬಂದ ನಮ್ಮ ಮೇಲೂ ಕುಮಾರನಿಗೆ ನಂಬಿಕೆ ತಪ್ಪಬಹುದೆಂದು ಭದ್ರಭಟನ ಅಭಿಪ್ರಾಯವಿದ್ದೀತು.

ಮಲಯಕೇತು—ಒಪ್ಪತಕ್ಕ ಮಾತು. . . . ಅಗೋ, ಕಂಚುಕಿ ಬರುತ್ತಿದ್ದಾನೆ.

(ಕಂಚುಕಿ ಎದುರಾಗಿ ಬರುವನು.)

ಮಲಯಕೇತು—ಜಾಜಲಿ, ಅಮಾತ್ಯರ ಸಮಯವೇನು?

ಕಂಚುಕಿ—ಅಮಾತ್ಯರೇನೋ ಶಿರೋವೇದನೆಯಿಂದ ನರಳುತ್ತಿದ್ದಾರಂತೆ. ಆದರೆ ಈಗ ತಾನೆ ಕುಸುಮಪುರದ ಕಡೆಯಿಂದ ಒಬ್ಬ ಗೂಢಚಾರನು ಬಂದನು; ಅವನನ್ನು ಒಳಕ್ಕೆ ಕರಸಿಕೊಂಡರು.

ಮಲಯಕೇತು—ಭಾಗುರಾಯಣ, ಕುಸುಮಪುರದ ಕಡೆಯಿಂದ ಗೂಢಚಾರನಂತೆ. ಏನೋ ವಿಶೇಷ ವರ್ತಮಾನವಿದೆ. ನಾವು ಎದುರಾಗಿ ಹೋದರೆ, ನಮಗೆ ಎಷ್ಟು ತಿಳಿಯಬೇಕೋ ಅಷ್ಟೇ ತಿಳಿದೀತು.

ಮರೆಯಲ್ಲಿ ನಿಂತು ಅವರ ಮಾತು ಕೇಳುವುದಕ್ಕಾದರೆ . . . (ಕಂಚುಕಿಗೆ) ಜಾಜಲಿ, ನಾವು ಅಮಾತ್ಯರ ದರ್ಶನಕ್ಕಾಗಿ ಹೋಗುತ್ತಿರುವ ಸಂಗತಿ ಅಲ್ಲಿ ಯಾರಿಗೂ ತಿಳಿದಿಲ್ಲವಷ್ಟೆ ?

ಜಾಜಲಿ—ಇಲ್ಲ. ಕುಮಾರನ ಅಪ್ಪಣೆ ಮೊದಲೇ ಆಗಿರಲಿಲ್ಲವೆ ?

ಮಲಯಕೇತು—ಸರಿ, ಹಾಗಾದರೆ ಅಮಾತ್ಯರ ಚಾರನನ್ನು ಬಾಗಿಲಲ್ಲೇ ತಡೆದು ನಾವು ನೆಟ್ಟನೆ ಶಯನಗೃಹದ ಬಳಿಗೇ ಹೋಗಬಹುದು. ಭಾಗುರಾಯಣ, ಬಾ, ಬೇಗ ಹೋಗೋಣ.

ಭಾಗುರಾಯಣ—ಕುಮಾರ, ನೀನು ಹೊಂಚಿಕೇಳಿದರೆ ಅಮಾತ್ಯರು ಅದನ್ನು ಅನ್ಯಥಾ ಭಾವಿಸಲಾರರು. ನಾನೂ ಬಂದರೆ ಅದು ಅವರಿಗೆ ಅವಮಾನ ಮಾಡಿದಂತಲ್ಲವೆ ? ನೀನೊಬ್ಬನೇ ಹೋಗುವುದು ಉಚಿತ.

ಮಲಯಕೇತು—ಛೇ, ಛೇ ! ಭಾಗುರಾಯಣ, ನೀನು ಬೇರೆ ನಾನು ಬೇರೆಯೆ ? . . . . ನಿನಗೆ ಅಷ್ಟು ಸಂಕೋಚವಾದರೆ ಒಂದು ಕೆಲಸ ಮಾಡು. ಅವರ ಮಾತುಗಳನ್ನು ನಾವಿಬ್ಬರೂ ಆಲಿಸೋಣ ; ನನಗೆ ತಿಳಿಯದ ಅಂಶಗಳನ್ನು ನೀನು ವಿವರಿಸು. ಮಾತು ಮುಗಿದ ಮೇಲೆ ನಾನೊಬ್ಬನೇ ಒಳಕ್ಕೆ ಹೋಗುತ್ತೇನೆ. ಕಾಣಿಸಿಕೊಳ್ಳದ ಹಾಗೆ ನೀನು ಹಿಂದಿರುಗುವೆಯಂತೆ.—ಬಾ, ಬಾ. (ಕಂಚುಕಿಗೆ) ಜಾಜಲಿ, ನಾವು ಪ್ರವೇಶಿಸಿದ ಮೇಲೆ ನೀನು ಹೆಬ್ಬಾಗಿಲಲ್ಲೇ ನಿಂತು ಒಳಕ್ಕೆ ಯಾರೂ ಬಾರದಂತೆ ನೋಡಿಕೊ. (ನಡೆಯುವರು.)

ತೆರೆ.

## ದೃಶ್ಯ : ೨

(ರಾಕ್ಷಸನ ಶಯನಗೃಹ : ಮಂಚದ ಮೇಲೆ ಹಾಸಿಗೆಯಲ್ಲಿ ರಾಕ್ಷಸನಿರುವನು ; ಬಳಿಯ ಒಂದು ಪೀಠದ ಮೇಲೆ ಶಕಟದಾಸನು ಕುಳಿತಿರುವನು. ಕೆಳಗೆ ಕುಳಿತು ಕರಭಕನು ಮಾತಾಡುತ್ತಿರುವನು.)

ಕರಭಕ—ಆ ಬಳಿಕ, ಅಮಾತ್ಯರು ಮೊದಲೇ ಅಪ್ಪಣೆ ಕೊಡಿಸಿದ್ದಂತೆ ವಸಂತಕನೂ ಚತುರಕನೂ ಚಂದ್ರಗುಪ್ತನನ್ನು ಕೆರಳಿಸುವ ಪದ್ಯಗಳನ್ನು ವಾಚಿಸಿದರು.

ರಾಕ್ಷಸ—ಭಲಾ ವಸಂತಕ ! ಸಕಾಲದಲ್ಲಿ ಬಿತ್ತಿದ ಬೀಜ ಫಲವನ್ನು ಕೊಟ್ಟೇ ಕೊಡುತ್ತದೆ. . . . ತನ್ನ ವಿನೋದಕ್ಕೆ ಯಾರಾದರೂ ಅಡ್ಡಿಮಾಡಿದರೆ ಸಾಮಾನ್ಯನೂ ಕೂಡ ಸೈರಿಸುವುದಿಲ್ಲ; ಇನ್ನು ಲೋಕೋತ್ತರವಾದ ತೇಜಸ್ಸುಳ್ಳ ಭೂಪಾಲನು ಸೈರಿಸುತ್ತಾನೆಯೇ ? . . . . ಆ ಮೇಲೆ ?

ಕರಭಕ—ಆ ಮೇಲೆ ಚಂದ್ರಗುಪ್ತನು ಈ ವೈತಾಳಿಕರಿಗೆ ಪಾರಿತೋಷಿಕವನ್ನು ಕೊಡಬೇಕೆಂದು ಆಜ್ಞೆಮಾಡಿದನು. ಚಾಣಕ್ಯನು ಅದನ್ನೂ ಸಾಗಗೊಡಲಿಲ್ಲ. ಚಂದ್ರಗುಪ್ತನಿಗೆ ರೇಗಿಹೋಯಿತು. ನಡುವೆ ಮಾತು ಬಂದಾಗ ಅವನು ಅಮಾತ್ಯರನ್ನು ವಿಶೇಷವಾಗಿ ಶ್ಲಾಘಿಸಿ ಚಾಣಕ್ಯನನ್ನು ಅಧಿಕಾರದಿಂದ ಕಿತ್ತುಹಾಕಿದನು.

ರಾಕ್ಷಸ—ಆಹಾ ! . . . ಆದರೆ, ಕೌಮುದೀಮಹೋತ್ಸವವನ್ನು ನಿಲ್ಲಿಸಿದನೆಂಬ ಒಂದು ಕಾರಣದಿಂದಲೇ ಇಷ್ಟೆಲ್ಲಾ ನಡೆದಿರಲಾರದು. ಚಾಣಕ್ಯನು ತುಂಬಾ ಪ್ರಜ್ಞಾಶಾಲಿ ; ನಿಷ್ಕಾರಣವಾಗಿ ಚಂದ್ರಗುಪ್ತನನ್ನು ರೇಗಿಸಲಾರನು. ಚಂದ್ರಗುಪ್ತನೂ ಕೃತಜ್ಞತೆಯನ್ನು ಮರೆತು ಇಷ್ಟು ಮಾತ್ರಕ್ಕೇ ಮರ್ಯಾದೆಯನ್ನು ಮೀರಿರಲಾರನು. (ಕರಭಕನಿಗೆ) ಚಂದ್ರಗುಪ್ತನ ಕೋಪಕ್ಕೆ ಮತ್ತೇನಾದರೂ ಕಾರಣವುಂಟೋ ?

ಕರಭಕ—ಉಂಟು. ಮಲಯಕೇತುವೂ ಅಮಾತ್ಯ ರಾಕ್ಷಸನೂ ತಪ್ಪಿಸಿಕೊಂಡು ಹೋಗುತ್ತಿದ್ದರೂ ನೀವು ಉಪೇಕ್ಷಿಸಿದಿರಿ; ನಿಮ್ಮಲ್ಲಿ ಚಾತುರ್ಯವಿಲ್ಲ—ಎಂದು ಚಾಣಕ್ಯನನ್ನು ಚಂದ್ರಗುಪ್ತನು ಹೀಯಾಳಿಸಿದನು.

ರಾಕ್ಷಸ—(ಸಂತೋಷದಿಂದ) ಸರಿ, ಸರಿ. ಶಕಟದಾಸ, ಚಂದ್ರಗುಪ್ತನು ನನ್ನ ಕೈಗೆ ಬಿದ್ದ ಹಾಗೆಯೇ ಆಯಿತು. ಇನ್ನು ಚಂದನದಾಸನಿಗೆ ಬಿಡುಗಡೆಯಾಗುತ್ತದೆ; ನೀನೂ ನಿನ್ನ ಪತ್ನೀಪುತ್ರರನ್ನು ನೋಡುತ್ತೀಯೆ. (ಕರಭಕನಿಗೆ) ಅಧಿಕಾರ ತಪ್ಪಿದೀಚೆಗೆ ಆ ಬ್ರಾಹ್ಮಣ ಎಲ್ಲಿದ್ದಾನೆ ?

ಕರಭಕ—ಕುಸುಮಪುರದಲ್ಲಿಯೇ ಇನ್ನೂ ಇದ್ದಾನೆ.

ರಾಕ್ಷಸ—(ಶಂಕಿಸಿ) ಅಲ್ಲಿಯೇ ಇದ್ದಾನೆಯೇ ? ತಪೋವನಕ್ಕೂ ಹೋಗಲಿಲ್ಲ, ಪ್ರತಿಜ್ಞೆಯನ್ನಾದರೂ ಹೂಡಲಿಲ್ಲ ?

ಕರಭಕ—ತಪೋವನಕ್ಕೆ ಹೋಗುತ್ತಾನೆಂದು ವದಂತಿ.

ರಾಕ್ಷಸ—ಶಕಟದಾಸ, ಇದು ಒಪ್ಪುವ ಹಾಗಿಲ್ಲ. ಭೂಲೋಕದ ದೇವೇಂದ್ರನಂತಿದ್ದ ನಂದಮಹಾರಾಜನು ತನ್ನನ್ನು ಅಗ್ರಾಸನದಿಂದ ಕೆಳಕ್ಕೆ ತಳ್ಳಿಸಿದ ಅಪಮಾನವನ್ನೇ ಈ ಚಾಣಕ್ಯನು ಸಹಿಸಲಿಲ್ಲ. ಈಗ ಯಾರಿಗೆ ರಾಜಪದವಿಯನ್ನು ತಾನೇ ಅನುಗ್ರಹಿಸಿದನೋ ಆ ಮೌರ್ಯನಿಂದಲೇ ಒದಗಿದ ತಿರಸ್ಕಾರವನ್ನು ಹೇಗೆ ಸಹಿಸಿಕೊಂಡಿದ್ದಾನು ?

ಶಕಟದಾಸ—ಇಲ್ಲಿ ಸಂಶಯಕ್ಕೆ ಕೆಲಸವಿಲ್ಲ. ಕರಭಕನ ಮಾತು ಸಂಗತವಾಗಿದೆ; ಅಮಾತ್ಯರು ಪರಾಂಬರಿಸಬೇಕು. ಹಿಂದೆ ಮಾಡಿದ ಒಂದು ಪ್ರತಿಜ್ಞೆಯನ್ನು ಸಾಧಿಸುವುದಕ್ಕೆ ತಾನು ಪಟ್ಟ ಕಷ್ಟವನ್ನು ಚಾಣಕ್ಯನು ಸ್ಮರಿಸಿಕೊಂಡಿದ್ದಾನೆ; ದೈವಯೋಗದಿಂದ ಮಾತ್ರ ಅದು ನೆರವೇರಿತು. ಆದ್ದರಿಂದಲೇ ಆ ಧೂರ್ತನು ಮತ್ತೆ ಪ್ರತಿಜ್ಞೆ ಮಾಡುವುದಕ್ಕೆ ಹಿಂಜರಿದಿದ್ದಾನೆ.

ರಾಕ್ಷಸ—(ಯೋಚಿಸಿ) ಹಾಗೆಯೇ ಇರಬೇಕು. ಅಂತೂ ಚಂದ್ರಗುಪ್ತನ ಬಳಿಯಿಂದ ಆ ಕೌಟಿಲ್ಯನು ತೊಲಗಿದನು. ನಮ್ಮ ಕಾರ್ಯಸಿದ್ಧಿಯ ದಿನಗಳು ಒದಗಿದುವು. . . . ಇನ್ನು ಕರಭಕನು ವಿಶ್ರಮಿಸಿಕೊಳ್ಳುವುದಕ್ಕೆ ಏರ್ಪಾಡನ್ನು ಮಾಡು, ಹೋಗು. (ಶಕಟದಾಸನೂ ಕರಭಕನೂ ಎದ್ದು ಹೊರಡುವರು.) ನಾನು ಕುಮಾರನನ್ನು ಇನ್ನು ನೋಡಬೇಕು. ಯಾರ . . . ?

(ಮಲಯಕೇತು ಥಟ್ಟನೆ ಪ್ರವೇಶಿಸುವನು.)

ಮಲಯಕೇತು—(ಮುಖದ ಆತಂಕವನ್ನು ಹುದುಗಿಸಿ ಪ್ರಸನ್ನತೆಯನ್ನು ತಂದುಕೊಳ್ಳುತ್ತಾ, ಮುಂದೆ ಬಂದು) ಅಮಾತ್ಯರನ್ನು ನೋಡಲು ನಾನೇ ಬಂದಿದ್ದೇನೆ.

ರಾಕ್ಷಸ—(ಬೆರಗಾಗಿ ನೋಡಿ) ಓಹೋ ! (ಹಾಸಿಗೆಯಿಂದ ಎದ್ದು) ಕುಮಾರ, ಈ ಮಂಚದ ಮೇಲೆಯೇ ಕುಳಿತುಕೊಳ್ಳಬೇಕು. ಇದೇನು ಅನಿರೀಕ್ಷಿತವಾದ ಅನುಗ್ರಹ !

ಮಲಯಕೇತು—(ಶಕಟದಾಸನು ಬಿಟ್ಟಿದ್ದ ಪೀಠದಲ್ಲಿ ಕುಳಿತು) ನಾನು ಇಲ್ಲಿಯೇ ಕುಳಿತುಕೊಳ್ಳುತ್ತೇನೆ. ಅಮಾತ್ಯರೂ ಕುಳಿತುಕೊಳ್ಳಬೇಕು. (ಅಮಾತ್ಯನು ಕುಳಿತುಕೊಳ್ಳುವನು.) ತಮಗೆ ದೇಹಾಲಸ್ಯವೆಂದು ಕೇಳಿ ಆತಂಕದಿಂದ ತಮ್ಮ ಸಮಯವನ್ನು ಕಾಯದೆಯೆ ಹೊರಟುಬಂದೆ. ಈಗ ತಲೆ ನೋವು ಇಳಿದಿದೆಯೇ ?

ರಾಕ್ಷಸ—ಕುಮಾರ, ಈ 'ಕುಮಾರ' ಶಬ್ದದ ಸ್ಥಾನವನ್ನು 'ಅಧಿರಾಜ' ಶಬ್ದವು ಆಕ್ರಮಿಸುವ ತನಕ ನನ್ನ ತಲೆನೋವು ಇಳಿಯುವುದೆಲ್ಲಿ ಬಂತು?

ಮಲಯಕೇತು—ಅಮಾತ್ಯರು ಕೈಕೊಂಡ ಬಳಿಕ ಅದೇನೂ ದುರ್ಲಭವಲ್ಲ. ಇನ್ನೆಷ್ಟು ದಿನಗಳು ಹೀಗೆಯೇ, ಶತ್ರುವಿಗೆ ವ್ಯಸನ ಸಂಘಟಿಸಲಿ, ವ್ಯಸನ ಸಂಘಟಿಸಲಿ ಎಂದು ನಿರೀಕ್ಷಿಸುತ್ತಾ, ಸೈನ್ಯವು ಸಜ್ಜಾಗಿದ್ದರೂ ಕೈಬಿಟ್ಟುಕೊಂಡು ಕುಳಿತಿರುವುದು ?

ರಾಕ್ಷಸ—ಇನ್ನೂ ಏಕೆ ಕಾಲಕಳೆಯಬೇಕು ? ಹೊರಡು ವಿಜಯ ಯಾತ್ರೆಗೆ.

ಮಲಯಕೇತು—ಆರ್ಯ, ಶತ್ರುಗಳಿಗೆ ವ್ಯಸನ ಸಂಘಟಿಸಿತೆ ?

ರಾಕ್ಷಸ—ಸಂಘಟಿಸಿತು.

ಮಲಯಕೇತು—ಎಂಥ ವ್ಯಸನ ಅದು ?

ರಾಕ್ಷಸ—ಸಚಿವವ್ಯಸನ; ಮತ್ತೆ ಯಾವುದು ! ಚಂದ್ರಗುಪ್ತನಿಂದ ಚಾಣಕ್ಯನು ತೊಲಗಿದನು.

ಮಲಯಕೇತು—ಅಮಾತ್ಯರೆ, ಸಚಿವವ್ಯಸನವೇ ತಾನೆ.

ರಾಕ್ಷಸ—ಮಿಕ್ಕ ರಾಜರಿಗೆ ಸಚಿವವ್ಯಸನವು ಒಂದು ವೇಳೆ ವ್ಯಸನವಾಗದಿರಬಹುದು. ಆದರೆ ಚಂದ್ರಗುಪ್ತನಿಗೆ ಹಾಗಲ್ಲ.

ಮಲಯಕೇತು—ಉಂಟೆ ? ಚಂದ್ರಗುಪ್ತನಲ್ಲಿ ಅಧಿಕಾರಿಗಳಿಗೂ ಪ್ರಜೆಗಳಿಗೂ ವೈಮನಸ್ಯ ಹುಟ್ಟುವುದಕ್ಕೆ ಚಾಣಕ್ಯನ ದೋಷಗಳೇ ಕಾರಣ. ಅವನನ್ನು ನಿರಾಕರಿಸಿದ ಮೇಲೆ ಚಂದ್ರಗುಪ್ತನಲ್ಲಿ ಮುಂಚೆಯೇ ಅನುರಕ್ತರಾಗಿದ್ದವರು ಈಗಲಂತೂ ಇನ್ನೂ ಹೆಚ್ಚಿನ ಅನುರಾಗವನ್ನು ತೋರಿಸುವರಷ್ಟೆ.

ರಾಕ್ಷಸ—ಹಾಗಲ್ಲ ಅದು. ಆ ಅಧಿಕಾರಿ ಪ್ರಜೆಗಳಲ್ಲಿ ಎರಡು ಬಗೆ: ಚಂದ್ರ

ಗುಪ್ತನ ಸಹಾಯಕರು ಕೆಲವರು, ನಂದಪಕ್ಷದವರು ಮಿಕ್ಕವರು. ಚಾಣಕ್ಯನ ದೋಷಗಳಿಂದ ವಿಶ್ವಾಸಗುಂದಿದ್ದವರು ಚಂದ್ರಗುಪ್ತನ ಸಹಾಯಕರು ಮಾತ್ರ; ನಂದಕುಲಾಶ್ರಿತರಲ್ಲ. ಇವರಿಗಾದರೆ ನಂದ ವಂಶವನ್ನು ತೊಡೆದುಹಾಕಿದವನು ಇವನೆಂಬ ರೋಷವೂ ದ್ವೇಷವೂ ಚಂದ್ರಗುಪ್ತನ ಮೇಲೆ ಎಂದಿಗೂ ಇದ್ದೇ ಇದೆ. ಆದರೆ ಸದಾಶ್ರಯ ದೊರೆಯುದ್ದರಿಂದ ಅವರು ಚಂದ್ರಗುಪ್ತನನ್ನೇ ಅನುಸರಿಸುತ್ತಿದ್ದಾರೆ; ನಿನ್ನಂಥ ಸಮರ್ಥನು ದಂಡೆತ್ತಿ ಹೊರಟರೆ, ಕೂಡಲೆ ಚಂದ್ರಗುಪ್ತ ನನ್ನು ತೊರೆದು ನಿನ್ನನ್ನೇ ಆಶ್ರಯಿಸುತ್ತಾರೆ. ಇದಕ್ಕೆ ನಾನೇ ನಿದರ್ಶನ.

ಮಲಯಕೇತು—ಸರಿ! . . . ನಮ್ಮ ದಂಡಯಾತ್ರೆಗೆ ಈ ಸಚಿವವ್ಯಸನವೊಂದೇ ಕಾರಣವೋ ಮತ್ತೇನಾದರೂ ಉಂಟೋ?

ರಾಕ್ಷಸ—ಮತ್ತೆ ಹಲವಿದ್ದರೇನು? ಇದು ತಾನೆ ಅತಿಮುಖ್ಯ.

ಮಲಯಕೇತು—ಅಮಾತ್ಯರೆ, ಅದು ಹೇಗೆ ಅತಿಮುಖ್ಯ? ಈಗ ಚಂದ್ರ ಗುಪ್ತನು ತನ್ನ ಕಾರ್ಯಭಾರವನ್ನು ಮತ್ತೊಬ್ಬ ಮಂತ್ರಿಗೆ ವಹಿಸಿ ಯಾಗಲಿ ತಾನೇ ಕೈಕೊಂಡಾಗಲಿ ನಮ್ಮನ್ನು ಎದುರಿಸಲಾರದಷ್ಟು ಅಸಮರ್ಥನೆ?

ರಾಕ್ಷಸ—ಅಸಮರ್ಥನೇ ಸರಿ; ಸಂದೇಹವಿಲ್ಲದೆ. ಏಕೆಂದರೆ ಆತ್ಮಾಯತ್ತ ಸಿದ್ಧಿಯುಳ್ಳವರಿಗೆ ಅದು ಸಾಧ್ಯ. ಆ ದುರುಳ ಮೌರ್ಯನು ಮೊದಲಿ ನಿಂದಲೂ ಸಚಿವಾಯತ್ತಸಿದ್ಧಿಯನ್ನು ಮಾತ್ರ ಬಲ್ಲವನು. ಕಣ್ಣಿಲ್ಲ ದವನು ಲೋಕವ್ಯವಹಾರವನ್ನು ನೋಡುವುದಕ್ಕಾಗುತ್ತದೆಯೆ? ಅವನು ಈಗ ತಾಯನ್ನಗಲಿದ ಕರುವಿನಂತಿದ್ದಾನೆ. ಪ್ರಪಂಚ ಜ್ಞಾನವು ಆ ಮೂಢನಿಗೆ ಎಳ್ಳಷ್ಟೂ ಇಲ್ಲ. ಇನ್ನು ನಮ್ಮನ್ನು ಎದುರಿಸುವುದಕ್ಕೆ ಹೇಗೆ ಸಮರ್ಥನಾದಾನು?

ಮಲಯಕೇತು—(ತನ್ನಲ್ಲಿ) ಸದ್ಯಃ ನಾನು ಸಚಿವಾಯತ್ತತಂತ್ರನಲ್ಲದಿರುವುದು ನನ್ನ ಭಾಗ್ಯ. (ಪ್ರಕಾಶವಾಗಿ) ಹೀಗಿದ್ದರೂ ಶತ್ರುವ್ಯಸನದ ಜೊತೆಗೆ ವಿಜಿಗೀಷುವಿಗೂ ಅನುಕೂಲ ಕಾರಣಗಳಿದ್ದರೆ ತಾನೆ ಪೂರ್ಣ ವಿಜಯವು ಸಿದ್ಧಿಸುವುದು?

ರಾಕ್ಷಸ—ಕುಮಾರ, ಪೂರ್ಣವಿಜಯವು ಸಿದ್ಧಿಸತಕ್ಕ ಅನುಕೂಲತೆಗಳೇ ಉಂಟು. ನೋಡು: ವಿಜಿಗೀಷುವಾದ ನಿನ್ನ ಕೈಕೆಳಗೆ ಉತ್ಕೃಷ್ಟ ಸೈನ್ಯ; ಸಂದರಲ್ಲೇ ಅನುರಾಗ ನಟ್ಟಿರುವ ಕುಸುಮಪುರ; ಅಧಿಕಾರ ತಪ್ಪಿಹೋದ ಚಾಣಕ್ಯ; ಇನ್ನೂ ಹೊಸದಾಗಿ ರಾಜನಾದ ಚಂದ್ರಗುಪ್ತ; ಸ್ವಾಧೀನನಾಗಿರುವ ನಾ-ನು-(ಮಾತು ಸ್ವಲ್ಪ ಲಜ್ಜೆಯಿಂದ ಹೊರಡುವುದು.)—ದಾರಿಸಾಗುವುದೊಂದೇ ನಾವು ಮಾಡಬೇಕಾದ ವಿಜಯಪ್ರಯತ್ನ. ಎಲ್ಲಾ ಅನುಕೂಲತೆಗಳೂ ಸಿದ್ಧವಾಗಿವೆ. ನೀನು "ಆಗಲಿ" ಎನ್ನದಿರುವುದೊಂದೇ ಅಡ್ಡಿ.

ಮಲಯಕೇತು—ಹಾಗೆ ದಂಡಯಾತ್ರೆಗೆ ಕಾಲ ಒದಗಿದೆಯೆಂದು ಅಮಾತ್ಯರಿಗೆ ಕಂಡುಬಂದಿರುವಲ್ಲಿ ಇನ್ನೂ ಕುಳಿತಿರುವುದೇಕೆ? (ಎದ್ದು) ನಮ್ಮ ಮದಗಜಗಳು ಇನ್ನು ಶೋಣಾನದಿಯ ಜಲವನ್ನು ನೂರು ಮುಖವಾಗಿ ಕೆದರಲಿ; ವಿಂಧ್ಯಪರ್ವತವನ್ನು ಮೇಘಮಾಲೆ ಕವಿಯುವಂತೆ ಕುಸುಮಪುರವನ್ನು ಕವಿದು ಮದಧಾರೆಯ ಮಳೆಯನ್ನು ಸುರಿಸಲಿ. (ಹೊರಟುಹೋಗುವನು.)

ರಾಕ್ಷಸ—ಯಾರಲ್ಲಿ ?

(ಚಾರನು ಪ್ರವೇಶಿಸುವನು.)

ರಾಕ್ಷಸ—ಜ್ಯೋತಿಷರಲ್ಲಿ ಯಾರಿದ್ದಾರೆ ಹೊರಗೆ?

ಚಾರ—ಕ್ಷಪಣಕನಿದ್ದಾನೆ.

ರಾಕ್ಷಸ—(ತನ್ನಲ್ಲಿ)ಮೊಟ್ಟಮೊದಲೇ ಕ್ಷಪಣಕನೆ! (ಪ್ರಕಾಶವಾಗಿ) ಯಾರು?

ಚಾರ—ಹಿಂದೆ ಒಂದೆರಡು ಸಲ ಇಲ್ಲಿಗೆ ಬಂದಿದ್ದವನು: ಜೀವಸಿದ್ಧಿ.

ರಾಕ್ಷಸ—ಜೀವಸಿದ್ಧಿಯೇ ? (ತನ್ನಲ್ಲಿ) ನನಗಾಗಿ ಕಷ್ಟಪಟ್ಟಿದ್ದಾನೆ, ಪಾಪ! (ಪ್ರಕಾಶವಾಗಿ) ಸೌಮ್ಯವೇಷದಿಂದ ಒಳಕ್ಕೆ ಬರಹೇಳು.

ಚಾರ—ಅಪ್ಪಣೆ (ಹೋಗುವನು.)

(ಕೊಂಚ ಹೊತ್ತಿನಲ್ಲಿ ಕ್ಷಪಣಕನು ಪ್ರವೇಶಿಸುವನು.)

ಕ್ಷಪಣಕ—ಶ್ರಾವಕರಿಗೆ ಧರ್ಮಸಿದ್ಧಿಯುಂಟಾಗಲಿ.

ರಾಕ್ಷಸ—ಭಿಕ್ಷುಗಳೆ, ನಿಮ್ಮನ್ನು ನೋಡಿ ತುಂಬ ಸಂತೋಷವಾಯಿತು. ಈಚೆಗೆ ಕಾಣಿಸಲೇ ಇಲ್ಲವಲ್ಲ.

ಕ್ಷಪಣಕ—ಶ್ರಾವಕ, ಕುಸುಮಪುರದಲ್ಲಿ ಅವಮಾನಪಟ್ಟ ದಿನದಿಂದಲೂ ನನಗೆ ರಾಜತಂತ್ರಪ್ರವೀಣರ ಹತ್ತಿರ ಓಡಾಡುವುದಕ್ಕೆ ಹೆದರಿಕೆ. ಆದಷ್ಟು ದೂರವಾಗಿದ್ದರೆ ವಾಸಿ.

ರಾಕ್ಷಸ—ಭಿಕ್ಷುಗಳೇ, ಸ್ವಾಮಿಕಾರ್ಯಕ್ಕೋಸ್ಕರ ಸಲ್ಲದ ಅಪವಾದವನ್ನು ಹೊರಲೇ ಬೇಕು, ದೇಶಭ್ರಷ್ಟರಾಗಿ ಅಲೆಯಲೇ ಬೇಕು. . . . ಅದಿರಲಿ, ನಮ್ಮ ವಿಜಯಯಾತ್ರೆಗೆ ಪ್ರಶಸ್ತವಾದ ದಿನ ಯಾವುದು? ತಿಳಿಸಬೇಕು.

ಕ್ಷಪಣಕ—(ಯೋಚಿಸಿದಂತೆ ಮಾಡಿ) ದಿನಶುದ್ಧಿಯನ್ನು ನೋಡಿದೆ. ಈ ದಿನ ಮಧ್ಯಾಹ್ನದ ತನಕ ದೋಷವುಂಟು. ಬಳಿಕ ಹುಣ್ಣಿಮೆ ಬರುತ್ತದೆ; ಉತ್ತರದಿಂದ ದಕ್ಷಿಣಕ್ಕೆ ಪ್ರಯಾಣ ಮಾಡುವವನಿಗೆ ನಕ್ಷತ್ರವು ವಾಮಪಾರ್ಶ್ವಕ್ಕಿರುತ್ತದೆ. ಸಂಜೆಯಾಗುತ್ತಲೆ ಚಂದ್ರನ ಪೂರ್ಣ ಮಂಡಲ ಉದಿಸುತ್ತದೆ; ಕೇತು ಎದ್ದು ಮುಳುಗುತ್ತಾನೆ. ಪ್ರಯಾಣಕ್ಕೆ ಇದು ಒಳ್ಳೆಯ ಮುಹೂರ್ತ.

ರಾಕ್ಷಸ—ತಿಥಿಶುದ್ಧಿಯೇ ಇಲ್ಲವಲ್ಲ?

ಕ್ಷಪಣಕ—"ಏಕಗುಣಾ ತಿಥಿಃ ಚತುರ್ಗುಣಂ ನಕ್ಷತ್ರಂ." ತಿಥಿ ಒಂದು ಗುಣವಾದರೆ, ನಕ್ಷತ್ರ ನಾಲ್ಕು ಗುಣ. ನಾನು ಹೇಳಿದ ಲಗ್ನದಲ್ಲಿ ಹೊರಟರೆ ನಿಮಗೆ ಚಂದ್ರಬಲ ಒದಗುತ್ತದೆ; ಒಳ್ಳೆಯ ಸಿದ್ಧಿ ದೊರೆಯುತ್ತದೆ.

ರಾಕ್ಷಸ—ಭಿಕ್ಷುಗಳೆ, ಬೇರೆ ಜ್ಯೋತಿಷರನ್ನು ವಿಚಾರಿಸಿ ಹೇಳಬಾರದೆ?

ಕ್ಷಪಣಕ—ನೀನೇ ವಿಚಾರಿಸಬಹುದು. ನಾನಿನ್ನು ಹೊರಡುತ್ತೇನೆ.

ರಾಕ್ಷಸ—ಭಿಕ್ಷುಗಳು ಕೋಪಿಸಿಕೊಳ್ಳಲಿಲ್ಲವಷ್ಟೆ?

ಕ್ಷಪಣಕ—ನಿನ್ನಲ್ಲಿ ಕೋಪಿಸಿಕೊಂಡಿರುವವನು ಭಿಕ್ಷುವಲ್ಲ.

ರಾಕ್ಷಸ—ಮತ್ತೆ ಯಾರು?

ಕ್ಷಪಣಕ—ವಿಧಿ. ಅದರಿಂದಲೇ ಸ್ವಪಕ್ಷವನ್ನು ಬಿಟ್ಟು ಪರಪಕ್ಷವನ್ನು ಸಂಬಿದ್ದೀಯೆ. (ಹೊರಟುಹೋಗುವನು.)

ರಾಕ್ಷಸ—ಹೊರಟೇ ಹೋದನು! ಇಷ್ಟಕ್ಕೇ ಕೋಪ ಬರಬಹುದೆ? ಐಶ್ವರ್ಯ ಚಲಿಸಿದ ಬಳಿಕ ಆಶ್ರಿತರು ಕೈಬಿಡುವುದೇ ಹೀಗೆ. . . . ಪ್ರಿಯಂವದಕ!

(ಚಾರನು ಪ್ರವೇಶಿಸುವನು.)

ರಾಕ್ಷಸ—ಎಷ್ಟು ಹೊತ್ತಾಗಿದೆ ಈಗ?

ಚಾರ—ಸೂರ್ಯನು ಅಸ್ತಾಚಲಕ್ಕೆ ಇಳಿಯುತ್ತಿದ್ದಾನೆ.

ತೆರೆ.

# ಐದನೆಯ ಅಂಕ

## ದೃಶ್ಯ : ೧

(ಮಲಯಕೇತುವಿನ ರಾಜಧಾನಿಯಿಂದ ಕುಸುಮಪುರಕ್ಕೆ ದಾರಿ : ಮಲಯಕೇತುವಿನ ಸೈನ್ಯ ಶಿಬಿರ. ಕೈಯಲ್ಲಿ ಮೊಹರುಮಾಡಿದ ಲೇಖವನ್ನು ಹಿಡಿದು ಕಂಕುಳಲ್ಲಿ ಮೊಹರುಮಾಡಿದ ಪೆಟ್ಟಿಗೆಯನ್ನು ಇರುಕಿಕೊಂಡು, ಮೇಲೆ ಉತ್ತರೀಯವನ್ನು ಮುಚ್ಚಿಕೊಳ್ಳುತ್ತಾ ಸಿದ್ಧಾರ್ಥಕನು ಬರುವನು.)

ಸಿದ್ಧಾರ್ಥಕ—ಹಹಹಾ ! ಇನ್ನು ಚಾಣಕ್ಯರ ಕೃಪೆಗೆ ನಾನು ಪಾತ್ರನಾಗುವ ಸಮಯ ಹತ್ತಿರಕ್ಕೆ ಬಂತು. (ದೂರದಲ್ಲಿ ನೋಡಿ) ಇದು ಯಾರು ಎದುರಿಗೆ ? ಕ್ಷಪಣಕ ! ಅಪಶಕುನವಾಯಿತಲ್ಲ . . . . ಆಗಲಿ, ನನಗೆ ಅಪಶಕುನವೇ ಬೇಕು. ಎದುರಿಗೇ ಹೋಗೋಣ.

(ಕ್ಷಪಣಕನು ಪ್ರವೇಶಿಸುವನು.)

ಸಿದ್ಧಾರ್ಥಕ—ಭಿಕ್ಷುಗಳ ಪಾದಕ್ಕೆ ಅಡ್ಡಬಿದ್ದೆ.

ಕ್ಷಪಣಕ—ಶ್ರಾವಕನಿಗೆ ಧರ್ಮಸಿದ್ಧಿಯುಂಟಾಗಲಿ. (ದಿಟ್ಟಿಸಿ ನೋಡಿ) ನೀನು ಎಲ್ಲಿಗೋ ಪ್ರಯಾಣ ಹೊರಟಿರುವಂತೆ ಕಾಣಿಸುತ್ತದೆ.

ಸಿದ್ಧಾರ್ಥಕ—ತಮಗೆ ಹೇಗೆ ತಿಳಿಯಿತು ?

ಕ್ಷಪಣಕ—ತಿಳಿಯುವುದೇನು ಬಂತು ಇಲ್ಲಿ ! ನಿನ್ನ ಕೈಯ ಪತ್ರವೇ ಹೇಳುತ್ತದೆ.

ಸಿದ್ಧಾರ್ಥಕ—ತಾವು ಕಂಡುಹಿಡಿದುಬಿಟ್ಟಿರಿ ! ಪರದೇಶಕ್ಕೆ ಹೊರಟಿದ್ದೇನೆ. . . . ಭಿಕ್ಷುಗಳು ಹೇಳಬೇಕು : ಈ ದಿನ ಪ್ರಶಸ್ತವಾಗಿದೆಯೆ ?

ಕ್ಷಪಣಕ—(ನಕ್ಕು) ಕ್ಷೌರಮಾಡಿಸಿಕೊಂಡ ಮೇಲೆ ನಕ್ಷತ್ರವನ್ನು ಕೇಳುತ್ತಿದ್ದೀಯಲ್ಲ !

ಸಿದ್ಧಾರ್ಥಕ—ಈಗ ತಾನೆ ಏನಾಯಿತು ? ಹೇಳಿ. ಪ್ರಯಾಣಕ್ಕೆ ಅನುಕೂಲವಾಗಿದ್ದರೆ ಮುಂದೆ ಹೊರಡುತ್ತೇನೆ.

ಕ್ಷಪಣಕ—ಈ ಮಲಯಕೇತುವಿನ ಪಾಳೆಯದಲ್ಲಿ ಈಗ ಅನುಕೂಲವಾಗುವುದಿಲ್ಲ.

ಸಿದ್ಧಾರ್ಥಕ—ಅದೇಕೆ ?

ಕ್ಷಪಣಕ—ಕೇಳು. ಮೊದಲು ಈ ಪಾಳೆಯದಲ್ಲಿ ಯಾರು ಬೇಕಾದರೂ ಅಡ್ಡಿಯಿಲ್ಲದೆ ಬಂದು ಹೋಗಿ ಮಾಡಬಹುದಾಗಿತ್ತು. ಈಗ ಕುಸುಮಪುರ ಹತ್ತಿರವಾಯಿತು. ಆದ್ದರಿಂದ ಉಂಡಿಗೆಯನ್ನು ಪಡೆದಿದ್ದ ಹೊರತು ಯಾರಿಗೂ ಹೋಗುವುದಕ್ಕೂ ಬರುವುದಕ್ಕೂ ಅಪ್ಪಣೆಯಿಲ್ಲ. ಭಾಗುರಾಯಣನ ಉಂಡಿಗೆಯಿದ್ದರೆ ಮಾತ್ರ ನೀನು ನಿಶ್ಶಂಕೆಯಿಂದ ಹೋಗು ; ಇಲ್ಲವಾದರೆ ನಿಂತುಬಿಡು. ನೀನು ಉಕ್ಕಡದ ಕಾವಲಿನವರಿಗೆ ಸಿಕ್ಕಿ ಕೈಕಾಲು ಬಿಗಿಸಿಕೊಂಡು ಚಾವಡಿಗೆ ಹತ್ತಬೇಕಾಗದೆ ಇರಲಿ.

ಸಿದ್ಧಾರ್ಥಕ—ನಾನು ಅಮಾತ್ಯ ರಾಕ್ಷಸರ ಕಡೆಯವನೆಂದು ತಮಗೆ ಗೊತ್ತಿಲ್ಲವೆ? ಉಂಡಿಗೆಯಿಲ್ಲದೆ ಹೋದರೂ ನನ್ನನ್ನು ತಡೆಯುವ ಶಕ್ತಿ ಯಾರಿಗಿದೆ?

ಕ್ಷಪಣಕ—ರಾಕ್ಷಸನ ಕಡೆಯವನಾದರೂ ಆಗು, ಪಿಶಾಚಿಯ ಕಡೆಯವನಾದರೂ ಆಗು. ಉಂಡಿಗೆ ಇಲ್ಲದೆ ಇಲ್ಲಿಂದ ಹೊರಡುವುದಕ್ಕೆ ಮಾರ್ಗವೇ ಇಲ್ಲ.

ಸಿದ್ಧಾರ್ಥಕ—ಭಿಕ್ಷುಗಳೆ, ಕೋಪಿಸಿಕೊಳ್ಳಬಾರದು. ನನ್ನ ಕಾರ್ಯ ಸಿದ್ಧಿಸಲೆಂದು ಹೇಳಬೇಕು.

ಕ್ಷಪಣಕ—ಶ್ರಾವಕ, ಹೊರಡು. ನಾನಂತೂ ಭಾಗುರಾಯಣನ ಬಳಿಗೆ ಹೋಗಿ ಉಂಡಿಗೆಯನ್ನು ಕೇಳುತ್ತೇನೆ.

ಸಿದ್ಧಾರ್ಥಕ—ನಾನು ಹೀಗೇ ಹೊರಡುತ್ತೇನೆ. ಕಾವಲಿನವರು ಏನು ಮಾಡುತ್ತಾರೋ ನೋಡೋಣ. (ಇಬ್ಬರೂ ಹೋಗುವರು.)

ತೆರೆ.

## ದೃಶ್ಯ : ೨

(ಮಲಯಕೇತುವಿನ ಶಿಬಿರದಲ್ಲಿ ಒಂದು ಆಸ್ಥಾನಶಾಲೆ. ಮುಂದೆ ಎರಡು ಮೂರು ಪೀಠಗಳಿರುವುವು. ಹಿಂದುಗಡೆ ಎರಡು ಮೂರು ತೆರೆಗಳು ಇಳಿಬಿದ್ದಿರುವುವು. ಮಲಯಕೇತು ಪ್ರತೀಹಾರಿಯೊಂದಿಗೆ ಪ್ರವೇಶಿಸುವನು.)

ಮಲಯಕೇತು—(ಸುತ್ತಲೂ ನೋಡುತ್ತಾ) ವಿಜಯೆ, ಭಾಗುರಾಯಣನು ಕಾಣಿಸುವುದಿಲ್ಲ. ಎಲ್ಲಿ ? ವಿಚಾರಿಸು.

ಪ್ರತೀಹಾರಿ—ಅಪ್ಪಣೆ. (ಹೋಗುವಳು.)

ಮಲಯಕೇತು—(ತನ್ನಲ್ಲಿ) ರಾಕ್ಷಸನನ್ನು ನೆಚ್ಚಿ ದಂಡೆತ್ತಿ ಹೊರಟದ್ದಾಯಿತು. ಕುಸುಮಪುರ ಹತ್ತಿರಹತ್ತಿರವಾದ ಹಾಗೆ ನನ್ನ ಶಂಕೆಯೂ ಪ್ರಬಲವಾಗುತ್ತಿದೆ. . . . ಅವನು ಎಲ್ಲಿ ದ್ರೋಹಮಾಡುತ್ತಾನೋ ! ಆ ದಿನ ಕೇಳಿದ ಮಾತನ್ನು ನೆನೆದರೆ ಅವನ ಮನಸ್ಸು ಚಂದ್ರಗುಪ್ತನ ಕಡೆಗೆ ಹರಿಯುವಂತೆ ತೋರುತ್ತದೆ. ನಂದಕುಲದವನೆಂದು ಅವನೊಡನೆ ಸಂಧಿಮಾಡಿಕೊಂಡು ಬಿಡುತ್ತಾನೋ, ನನ್ನ ಮೇಲಿನ ಭಕ್ತಿಯನ್ನೇ ಸ್ಥಿರಪಡಿಸಿಕೊಂಡು ಸತ್ಯಸಂಧನಾಗಿ ನಿಲ್ಲುತ್ತಾನೋ ? . . . . ಯಾವ ನಿಷ್ಕರ್ಷೆಯನ್ನೂ ಮಾಡಲಾರೆ. ಈ ವಿಕಲ್ಪಕ್ಕೆ ಸಿಕ್ಕಿ, ಕುಂಬಾರನ ಚಕ್ರಕ್ಕೆ ಸಿಕ್ಕಿದಂತೆ ಮನಸ್ಸು ಗಿರ್ರನೆ ಸುತ್ತುತ್ತಿದೆ. ಯಾರನ್ನು ನೆಚ್ಚುವುದೋ, ಯಾರನ್ನು ಬಿಡುವುದೋ ! ಭಾಗುರಾಯಣನನ್ನು ತಿರುಗಿ ಕೇಳಿದ ಹೊರತು ಮನಸ್ಸು ನಿಲ್ಲುವುದಿಲ್ಲ. ಅವನೊಬ್ಬನೇ ಇವರಲ್ಲೆಲ್ಲಾ ನಿಷ್ಕಪಟಿ. . . .

(ಪ್ರತೀಹಾರಿ ಪ್ರವೇಶಿಸುವಳು.)

ಮಲಯಕೇತು—ವಿಜಯೆ, ಎಲ್ಲಿ ಭಾಗುರಾಯಣ ?

ಪ್ರತೀಹಾರಿ—ಇನ್ನೇನು, ಆತನು ಬರುವ ಸಮಯ. ಇದು ಪಾಳೆಯವನ್ನು ಬಿಟ್ಟು ಹೋಗುವವರಿಗೆ ಉಂಡಿಗೆ ಕೊಡುವ ವೇಳೆಯಂತೆ. "ನಾನು ಹತ್ತಿರದಲ್ಲೇ ಇರಬೇಕೆಂದು ಕುಮಾರನ ಇಚ್ಛೆ. ಆದ್ದರಿಂದ ಈ ಆಸ್ಥಾನಶಾಲೆಯಲ್ಲೇ ಕಾರ್ಯ ನಡಸುತ್ತೇನೆ" ಎಂದು ಭಾಗುರಾಯಣನು ಹೇಳಿಕಳುಹಿಸಿದ್ದಾನೆ.

ಮಲಯಕೇತು—ನನ್ನ ಮೇಲೆ ಎಷ್ಟು ಮಮತೆ ಅವನಿಗೆ! ಹಾಗಾದರೆ ಇಲ್ಲೇ ಕಾದಿರೋಣ. (ತೆರೆಯನ್ನು ನೋಡಿ, ಹುಡುಗಾಟಿಕೆಯಿಂದ) ವಿಜಯೆ, ವಿಜಯೆ, ನಾನು ಈ ತೆರೆಯ ಹಿಂದೆ ಅವಿತುಕೊಳ್ಳುತ್ತೇನೆ; ಭಾಗುರಾಯಣನು ಬರುತ್ತಲೂ ಕಾಣದಹಾಗೆ ಹಿಂದಿನಿಂದ ಬಂದು ಅವನ ಕಣ್ಣುಮುಚ್ಚಿ ಚೇಷ್ಟೆ ಮಾಡುತ್ತೇನೆ. ಇದನ್ನು ಯಾರಿಗೂ ಹೇಳಬೇಡ. ನೀನೂ ದೂರದಲ್ಲೇ ಇರು.

(ವಿಜಯೆ ಹೋಗುವಳು; ಮಲಯಕೇತು ಪೀಠದ ಹಿಂದೆ ತೆರೆಯ ಮರೆಯಲ್ಲಿ ನಿಲ್ಲುವನು. ಒಂದು ನಿಮಿಷವಾದ ಮೇಲೆ ಭಾಗುರಾಯಣನೂ ಚಾರನೂ ಪ್ರವೇಶಿಸುವರು.)

ಭಾಗುರಾಯಣ—(ಚಾರನಿಗೆ) ಹೋಗು, ಹೊರಗೆ ಯಾರಾದರೂ ಉಂಡಿಗೆಯನ್ನು ಕೇಳುವುದಕ್ಕೆ ಬಂದಿದ್ದರೆ ಒಳಕ್ಕೆ ಕಳುಹಿಸು.

(ಚಾರನು ಹೋಗುವನು. ಭಾಗುರಾಯಣನು ಪೀಠದ ಮೇಲೆ ಕುಳಿತುಕೊಳ್ಳುತ್ತಿರುವನು. ಮಲಯಕೇತು ತೆರೆಯ ಹಿಂದಿನಿಂದ ಹೊರಕ್ಕೆ ಕಾಣಿಸಿಕೊಳ್ಳುವನು. ಅಷ್ಟರಲ್ಲಿ ಕ್ಷಪಣಕನು ಪ್ರವೇಶಿಸುವುದನ್ನು ಕಂಡು ಮತ್ತೆ ಮರೆಯಾಗುವನು.)

ಕ್ಷಪಣಕ—(ಮುಂದೆ ಬಂದು) ಶ್ರಾವಕರಿಗೆ ಧರ್ಮಸಿದ್ಧಿಯುಂಟಾಗಲಿ.

ಭಾಗುರಾಯಣ—(ನೋಡಿ, ತನ್ನಲ್ಲಿ) ಜೀವಸಿದ್ಧಿ! ರಾಕ್ಷಸನ ಮಿತ್ರ! (ಪ್ರಕಾಶವಾಗಿ) ಭಿಕ್ಷುಗಳೇ, ಎಲ್ಲಿಗೆ ಪ್ರಯಾಣ? ಅಮಾತ್ಯರಾಕ್ಷಸನ ಕೆಲಸದ ಮೇಲೆಯೋ?

ಕ್ಷಪಣಕ—ಶಾಂತಂ ಪಾಪಂ, ಶಾಂತಂ ಪಾಪಂ! ಶ್ರಾವಕ, ರಾಕ್ಷಸನದಾಗಲಿ ಪಿಶಾಚಿಯದಾಗಲಿ ಹೆಸರು ಎಲ್ಲಿ ಕೇಳಬರುವುದಿಲ್ಲವೋ ಅಲ್ಲಿಗೆ ಪ್ರಯಾಣ.

ಭಾಗುರಾಯಣ—ಮಿತ್ರನ ಮೇಲೆ ತುಂಬ ಪ್ರಣಯಕೋಪವುಂಟಾಗಿರುವಂತೆ ತೋರುತ್ತದೆ. ತಮಗೆ ರಾಕ್ಷಸನು ಮಾಡಿದ ಅಪರಾಧವೇನು?

ಕ್ಷಪಣಕ—ರಾಕ್ಷಸನು ನನಗೆ ಏನೊಂದು ಅಪರಾಧವನ್ನೂ ಮಾಡಿಲ್ಲ. ನಿರ್ಭಾಗ್ಯನಾದ ನಾನೇ ನನ್ನ ಕಾರ್ಯಗಳಿಗೆ ನಾಚಿಕೆಪಡುತ್ತಿದ್ದೇನೆ.

ಭಾಗುರಾಯಣ—ಭಿಕ್ಷುಗಳೆ, ನನ್ನ ಕುತೂಹಲವನ್ನು ಹೆಚ್ಚಿಸುತ್ತಿದ್ದೀರಿ. ಅದೇನು, ಕೇಳಬೇಕು.

(ಮಲಯಕೇತುವಿನ ಮುಖ ಸ್ವಲ್ಪ ಕಾಣಿಸುವುದು; ಮುಖದಲ್ಲಿ ಕುತೂಹಲದ ಚಿಹ್ನೆ ತೋರುವುದು.)

ಕ್ಷಪಣಕ—ಕೇಳಬಾರದ್ದನ್ನು ಕೇಳಿ ಏನು ಪ್ರಯೋಜನ?

ಭಾಗುರಾಯಣ—ಅದು ರಹಸ್ಯವಾದರೆ ಹಾಗಿರಲಿ.

ಕ್ಷಪಣಕ—ರಹಸ್ಯವೇನೂ ಅಲ್ಲ; ಆದರೆ ಬಹು ಘೋರ.

ಭಾಗುರಾಯಣ—ರಹಸ್ಯವಲ್ಲದಿದ್ದರೆ ಹೇಳಬಹುದಲ್ಲ.

ಕ್ಷಪಣಕ—ರಹಸ್ಯವಲ್ಲವಾದರೂ ನಾನು ಹೇಳಲಾರೆ.

ಭಾಗುರಾಯಣ—ನಾನೂ ಉಂಡಿಗೆಯನ್ನು ಕೊಡಲಾರೆ.

ಕ್ಷಪಣಕ—ಇನ್ನೇನು ಗತಿ! ಆಗಲಿ. ಕೇಳಬೇಕು. ಈ ನಿರ್ಭಾಗ್ಯನು ಮೊದಲು ಕುಸುಮಪುರದಲ್ಲಿ ವಾಸಮಾಡುತ್ತಿದ್ದಾಗ ರಾಕ್ಷಸನೊಡನೆ ಸ್ನೇಹ ಬೆಳಸಿದನು. ಆ ಸಮಯದಲ್ಲಿ ರಾಕ್ಷಸನು ಗೂಢವಾಗಿ ವಿಷಕನ್ಯೆಯನ್ನು ಪ್ರಯೋಗಿಸಿ ಪರ್ವತೇಶ್ವರನನ್ನು ಕೊಲ್ಲಿಸಿದನು.

(ಮಲಯಕೇತುವಿನ ಮುಖವು ವಿವರ್ಣವಾಗುವುದು.)

ಭಾಗುರಾಯಣ—ಹಾಗೇ! . . . . ಆಮೇಲೆ?

ಕ್ಷಪಣಕ—ಆಮೇಲೆ, ನಾನು ರಾಕ್ಷಸನ ಮಿತ್ರನೆಂದು ತಿಳಿದು ಚಾಣಕ್ಯ ಹತಕನು ನನ್ನ ಮೇಲೆ ಆ ದೋಷವನ್ನು ಹೊರಿಸಿ ಬಹಿರಂಗವಾಗಿ ಅವಮಾನಪಡಿಸಿ ನಗರದಿಂದ ಹೊರಡಿಸಿಬಿಟ್ಟನು. . . . ರಾಜತಂತ್ರ ನಿಪುಣನಾದ ರಾಕ್ಷಸನು ಈಗ ಅಂಥ ಮತ್ತೊಂದನ್ನೇನಾದರೂ ನಡಸಿಯಾನು; ಅದರ ಫಲವಾಗಿ ನಾನು ಜೀವಲೋಕವನ್ನೇ ಬಿಟ್ಟು ಹೊರಡಬೇಕಾದೀತು ಎಂದು ಹೆದರಿ ಮುಂಚೆಯೇ ಇಲ್ಲಿಂದ ಪ್ರಯಾಣ ಮಾಡುತ್ತಿದ್ದೇನೆ.

ಭಾಗುರಾಯಣ—ಭಿಕ್ಷುಗಳೆ, ಮಾತುಕೊಟ್ಟ ಮೇರೆಗೆ ಅರ್ಧರಾಜ್ಯವನ್ನು ಸಲ್ಲಿಸಬಾರದೆಂದು ಚಾಣಕ್ಯಹತಕನು ಈ ಅಕಾರ್ಯವನ್ನು ನಡಸಿದನು; ರಾಕ್ಷಸನಲ್ಲ—ಎಂದು ನಾವು ಕೇಳಿದ್ದೆವು.

ಕ್ಷಪಣಕ—(ಕಿವಿಗಳನ್ನು ಮುಚ್ಚಿಕೊಂಡು) ಶಾಂತಂ ಪಾಪಂ! ಚಾಣಕ್ಯನು

ನನಗೆ ದ್ವೇಷಿಯಾದ ಮಾತ್ರಕ್ಕೆ ಅನ್ಯಾಯವನ್ನಾಡಬಾರದು. ವಿಷಕನ್ಯೆಯ ಹೆಸರನ್ನು ಕೂಡ ಅವನು ಕೇಳಿದವನಲ್ಲ.

ಭಾಗುರಾಯಣ—ಉಂಡಿಗೆಯನ್ನು ಕೊಡುತ್ತೇನೆ. ಮೊದಲು ಈ ಅಂಶವನ್ನು ಕುಮಾರನಿಗೆ ಅರಿಕೆ ಮಾಡಬೇಕು, ಬನ್ನಿ. (ಏಳುತ್ತಿರುವನು.)

(ಅಷ್ಟರಲ್ಲಿ ಮಲಯಕೇತು ಥಿಗ್ಗನೆ ಮುಂದಕ್ಕೆ ಬರುವನು. ಭಾಗುರಾಯಣನೂ ಕ್ಷಪಣಕನೂ ವಿಸ್ಮಯದಿಂದ ನೋಡುತ್ತಿರುವರು.)

ಮಲಯಕೇತು—ಕೇಳಿದ್ದಾಯಿತು, ಭಾಗುರಾಯಣ. ಈ ಕರ್ಣಕಠೋರವಾದ ವಾರ್ತೆಯನ್ನು ರಾಕ್ಷಸನ ಮಿತ್ರನ ಬಾಯಿಂದಲೇ ಕೇಳಿದ್ದಾಯಿತು. ನಾನು ವಿನೋದಕ್ಕಾಗಿ ತೆರೆಯ ಹಿಂದುಗಡೆ ನಿಂತಾಗ, ತಗ್ಗುತ್ತ ಬಂದಿದ್ದ ಪಿತೃಶೋಕವು ಈ ರೀತಿ ದ್ವಿಗುಣವಾಗಿ ಮರುಕೊಳಿಸುವುದೆಂದು ಭಾವಿಸಿರಲಿಲ್ಲ.

ಕ್ಷಪಣಕ—(ತನ್ನಲ್ಲಿ) ಈ ಮಲಯಕೇತುವಿನ ಕಿವಿಗೆ ಬಿದ್ದಿತಲ್ಲ! ನನ್ನ ಕೆಲಸ ಈಡೇರಿತು. (ಪ್ರಕಾಶವಾಗಿ) ಶ್ರಾವಕ, ಮತ್ತೊಂದು ಬಾರಿ ಬಂದು ಉಂಡಿಗೆಯನ್ನು ತೆಗೆದುಕೊಳ್ಳುತ್ತೇನೆ. (ಹೋಗುವನು.)

ಮಲಯಕೇತು—(ಆಕಾಶದ ಕಡೆ ದಿಟ್ಟಿಸುತ್ತಾ, ಆವೇಶದಿಂದ) ರಾಕ್ಷಸ, ರಾಕ್ಷಸ, ಸರಿ, ಸರಿ!—ನಿನ್ನನ್ನು ಮಿತ್ರನೆಂದು ನಂಬಿ, ನಿನಗೇ ಸರ್ವಾಧಿಕಾರವನ್ನೂ ಒಪ್ಪಿಸಬೇಕೆಂದು ನನ್ನ ತಂದೆ ಎಣಿಸಿದ್ದನು. ಅಂಥವನನ್ನು ನೀನು ಕೊಲ್ಲಿಸಿ, ರಾಕ್ಷಸ,—ರಾಕ್ಷಸನೇ ನಿಜವಾಗಿ ಆದೆ. . . .

ಭಾಗುರಾಯಣ—(ತನ್ನಲ್ಲಿ) ಓಹೋ, ಈತನ ಕೋಪ ಹೆಚ್ಚುತ್ತಿದೆ; ರಾಕ್ಷಸನ ಪ್ರಾಣಕ್ಕೆ ಅಪಾಯ ಬಂದೀತು; ಆರ್ಯ ಚಾಣಕ್ಯರ ತಂತ್ರ ಕೆಟ್ಟುಹೋದೀತು. (ಪ್ರಕಾಶವಾಗಿ) ಕುಮಾರ, ಉದ್ವೇಗವನ್ನು ತಡೆದುಕೋ. ನೀನು ಪೀಠದಲ್ಲಿ ಕುಳಿತರೆ, ನಾನು ವಿಜ್ಞಾಪನೆ ಮಾಡತಕ್ಕದ್ದು ಕೊಂಚವಿದೆ.

ಮಲಯಕೇತು—(ಕುಳಿತು) ಮಿತ್ರ, ಏನು ಹೇಳಬೇಕೆಂದಿದ್ದೀಯೆ?

ಭಾಗುರಾಯಣ—ಕುಮಾರ, ಅರ್ಥಶಾಸ್ತ್ರದಂತೆ ವ್ಯವಹರಿಸತಕ್ಕವರಿಗೆ ಶತ್ರು ಮಿತ್ರ ಉದಾಸೀನರು ಉಂಟಾಗುವುದು ಅರ್ಥದ ಮೂಲಕ;

ಲೋಕದಲ್ಲಿರುವಂತೆ ಇಚ್ಛೆಯ ಮೂಲಕವಲ್ಲ. ಆ ಕಾಲದಲ್ಲಿ ನಂದ ವಂಶದ ಬೇರು ಇನ್ನೂ ಇತ್ತು; ನಂದರ ಮುದಿತಂದೆ ಸರ್ವಾರ್ಥ ಸಿದ್ಧಿ ತಪೋವನದಲ್ಲಿ ಇನ್ನೂ ಬದುಕಿದ್ದನು. ಅವನನ್ನಾದರೂ ಅವ ಲಂಬಿಸಿ ಮತ್ತೆ ರಾಜ್ಯವನ್ನು ಹೂಡಬೇಕೆಂದು ರಾಕ್ಷಸನು ಇಚ್ಛೆ ಪಟ್ಟಿದ್ದನೋ ಏನೋ. ಈ ಕಾರಣದಿಂದ ಚಂದ್ರಗುಪ್ತನಂತೆಯೇ ನಂದರಾಜ್ಯಕ್ಕೆ ಭಾಗಿಯಾದ ನಿನ್ನ ತಂದೆಯೂ ಅವನಿಗೆ ಪರಮ ಶತ್ರುವಾದನು. ಆದ್ದರಿಂದ ರಾಕ್ಷಸನು ಆ ರೀತಿ ಮಾಡಿದ್ದರಲ್ಲಿ ಅಷ್ಟು ದೋಷವಿಲ್ಲವೆಂದು ತೋರುತ್ತದೆ. ಈಚೆಗೆ ಸರ್ವಾರ್ಥಸಿದ್ಧಿ ತೀರಿಹೋದದ್ದರಿಂದ ಎಲ್ಲವೂ ವ್ಯತ್ಯಾಸವಾಯಿತು. ರಾಜನೀತಿಯೇ ಹೀಗೆ. ಅರ್ಥವಶದಿಂದ ಮಿತ್ರರು ಶತ್ರುಗಳಾಗುತ್ತಾರೆ; ಶತ್ರುಗಳು ಮಿತ್ರರಾಗುತ್ತಾರೆ. ಮನುಷ್ಯನು ಜೀವಿಸುತ್ತಿರುವಾಗಲೇ ಹಿಂದಿನ ವೃತ್ತಾಂತಗಳು ಮರೆತುಹೋಗಿ ಹೊಸ ಜನ್ಮ ಬಂದುಹೋಗು ತ್ತದೆ. . . . ಆದ್ದರಿಂದ ಈ ವಿಷಯದಲ್ಲಿ ರಾಕ್ಷಸನನ್ನು ನಿಂದಿಸ ಬಾರದು. ನಂದರಾಜ್ಯವನ್ನು ಸಾಧಿಸುವ ವರೆಗೂ ಹತ್ತಿರವೇ ಇಟ್ಟು ಕೊಳ್ಳಬೇಕು. ಆ ಬಳಿಕ ಆದರಿಸಬೇಕೋ ಪರಿಹರಿಸಬೇಕೋ ಅದು ಕುಮಾರನ ಇಚ್ಛೆ.

**ಮಲಯಕೇತು**—ಹೌದು. ಯುಕ್ತವಾದ ವಿಚಾರ. ಅಮಾತ್ಯನನ್ನು ಈಗ ವಧಿಸಿದರೆ ಅಧಿಕಾರಿಗಳಿಗೆ ಕಳವಳ ಹುಟ್ಟೀತು; ಅದರಿಂದ ವಿಜ ಯವು ಸಂದಿಗ್ಧವಾದೀತು.

(ಚಾರನು ಪ್ರವೇಶಿಸುವನು.)

**ಚಾರ**—ಕುಮಾರನಿಗೆ ವಿಜಯವಾಗಲಿ. (ಭಾಗುರಾಯಣನಿಗೆ) ಆರ್ಯ, ಉಕ್ಕಡದ ಕಾವಲುಗಾರರ ಮುಖಂಡನು ಹೀಗೆ ವಿಜ್ಞಾಪಿಸು ತ್ತಾನೆ: "ಒಂದು ಲೇಖವನ್ನು ಹಿಡಿದುಕೊಂಡು ಉಂಡಿಗೆಯಿಲ್ಲದೆ ಪಾಳೆಯಬಿಟ್ಟು ಹೊರಡುತ್ತಿದ್ದ ಒಬ್ಬ ಮನುಷ್ಯನನ್ನು ಹಿಡಿದಿದ್ದೇನೆ. ಆರ್ಯನು ಪರಾಂಬರಿಸಬೇಕು."

**ಭಾಗುರಾಯಣ**—ಎಲ್ಲಿ, ಆ ಮನುಷ್ಯ?

ಚಾರ—ಇಬ್ಬರು ಕಾವಲುಗಾರರು ಇಲ್ಲಿಗೇ ಹಿಡಿದು ತಂದಿದ್ದಾರೆ.

ಭಾಗುರಾಯಣ—ಹಾಗಾದರೆ ಒಳಕ್ಕೆ ಕರೆತರುವಂತೆ ಹೇಳು.

ಚಾರ—ಅಪ್ಪಣೆ. (ಹೋಗುವನು.)

ಭಾಗುರಾಯಣ—ಕುಮಾರ, ನಮ್ಮ ಪಾಳೆಯದಲ್ಲಿ ಹೀಗಾಗುವುದಕ್ಕೆ ಇದೇ ಮೊದಲು.

(ಚಾರನೂ, ಇಬ್ಬರು ಕಾವಲುಗಾರರ ನಡುವೆ ಬಂಧನದಲ್ಲಿ ಸಿದ್ಧಾರ್ಥಕನೂ ಪ್ರವೇಶಿಸುವರು.)

ಚಾರ—ಆರ್ಯ, ಇವನೇ ಆ ಮನುಷ್ಯ. (ಸಿದ್ಧಾರ್ಥಕನನ್ನು ತೋರಿಸುವನು.)

ಭಾಗುರಾಯಣ—(ನೋಡಿ) ಎಲಾ, ಇವನು ಹೊಸಬನೋ ಅಥವಾ ಇಲ್ಲಿಯವರಲ್ಲಿ ಯಾರಾದರೊಬ್ಬರ ಕಡೆಯವನೋ ?

ಸಿದ್ಧಾರ್ಥಕ—ಆರ್ಯ, ನಾನು ಅಮಾತ್ಯ ರಾಕ್ಷಸರ ಸೇವಕ : ಸಿದ್ಧಾರ್ಥಕ.

ಭಾಗುರಾಯಣ—ಹಾಗಾದರೆ ಉಂಡಿಗೆಯಿಲ್ಲದೆ ಏಕೆ ಪಾಳೆಯದಿಂದ ಹೊರಡುತ್ತಿದ್ದೆ ?

ಸಿದ್ಧಾರ್ಥಕ—ಕಾರ್ಯಗೌರವದ ಮೂಲಕ ಬಹಳ ತ್ವರೆಯಿಂದ ಹೊರಡಬೇಕಾಯಿತು.

ಭಾಗುರಾಯಣ—ಅದೆಂಥ ಕಾರ್ಯಗೌರವ, ರಾಜಶಾಸನವನ್ನೂ ಮೀರುವಂಥದು ?

ಮಲಯಕೇತು—ಭಾಗುರಾಯಣ, ಲೇಖವನ್ನು ಹಿಡಿದುಕೊಂಡು ಹೋಗುತ್ತಿದ್ದನಂತೆ. ಆ ಲೇಖವೆಲ್ಲಿ ? ತೆಗೆದುಕೊ.

ಚಾರ—ಇಲ್ಲಿಯೇ ಇದೆ. (ಸಿದ್ಧಾರ್ಥಕನ ಕೈಯಿಂದ ತೆಗೆದುಕೊಂಡು ಭಾಗುರಾಯಣನಿಗೆ ಕೊಡುವನು.)

ಭಾಗುರಾಯಣ—(ಅದರ ಮೇಲಿನ ಮೊಹರನ್ನು ನೋಡಿ) ಕುಮಾರ, ಇದೇ ಲೇಖ. ಇದರ ಮೇಲೆ ರಾಕ್ಷಸನ ಹೆಸರಿನ ಮುದ್ರೆಯಿದೆ.

ಮಲಯಕೇತು—ಮುದ್ರೆ ಕೆಡದ ಹಾಗೆ ಲೇಖವನ್ನು ಬಿಚ್ಚಿ ತೋರಿಸು. (ಭಾಗುರಾಯಣನು ಹಾಗೆಯೇ ಮಾಡಿ ತೋರಿಸುವನು. ಮಲಯಕೇತು ಓದುವನು.)

"ಸ್ವಸ್ತಿ. ಸ್ವಸ್ಥಾನದಲ್ಲಿರುವ ಮಹಾಶಯರಿಗೆ ಅನ್ಯಸ್ಥಾನದಿಂದ ಒಬ್ಬನು ವಿಜ್ಞಾಪಿಸಿಕೊಳ್ಳುವುದೇನೆಂದರೆ : ನಮ್ಮ ಪ್ರತಿಕಕ್ಷಿಯನ್ನು

ನಿರಾಕರಿಸಿ ಸತ್ಯವಂತನು ತನ್ನ ಮಾತನ್ನು ಉಳಿಸಿಕೊಂಡುದು ಗೋಚರಕ್ಕೆ ಬಂದಿತು. ಈಗ ನಮಗೆ ಅನುಕೂಲರಾಗಲು ಒಪ್ಪಿರುವ ನನ್ನ ಮಿತ್ರರಿಗೆ ಮೊದಲು ವಾಗ್ದಾನಮಾಡಿದ್ದಂತೆ ನಡಸಿಕೊಟ್ಟು ಪ್ರೋತ್ಸಾಹಿಸಿ ಸತ್ಯವಂತನು ಅವರ ಪ್ರೀತಿಯನ್ನು ಸ್ಥಿರಪಡಿಸಿಕೊಳ್ಳಬೇಕೆಂದು ಕೋರಿಕೆ. ಹೀಗೆ ಅನುಗ್ರಹಕ್ಕೆ ಪಾತ್ರರಾದ ಬಳಿಕ ಅವರು ಪೂರ್ವಾಶ್ರಯವನ್ನು ನಾಶಪಡಿಸಿ ಉಪಕಾರಿಯನ್ನು ಆಶ್ರಯಿಸುತ್ತಾರೆ. ಸತ್ಯವಂತನು ಇದನ್ನು ಮರೆತಿಲ್ಲವಾದರೂ ಮತ್ತೆ ಜ್ಞಾಪಿಸಿದ್ದೇನೆ. ಇವರಲ್ಲಿ ಕೆಲವರು ಶತ್ರುವಿನ ಭಂಡಾರವನ್ನೂ ಗಜಸೇನೆಯನ್ನೂ ಬಯಸತಕ್ಕವರು; ಕೆಲವರು ದೇಶವನ್ನು ಬಯಸತಕ್ಕವರು. ಸತ್ಯವಂತನು ಕಳುಹಿಸಿದ ಮೂರು ಅಲಂಕಾರಗಳೂ ಕೈಸೇರಿದುವು. ಬರಿಯ ಲೇಖವನ್ನು ಕಳುಹಿಸಬಾರದೆಂದು ಜೊತೆಯಲ್ಲಿ ಕಳುಹಿಸಿರುವ ಅಲ್ಪವಸ್ತುವನ್ನು ಸ್ವೀಕರಿಸಬೇಕು. ಬಾಯಿಮಾತನ್ನು ಈ ಆಪ್ತನಿಂದ ಕೇಳಿ ತಿಳಿದುಕೊಳ್ಳಬೇಕು.''

—ಭಾಗುರಾಯಣ, ಇದು ಎಂಥ ಲೇಖ?

ಭಾಗುರಾಯಣ—ಸಿದ್ಧಾರ್ಥಕ, ಯಾರದು ಈ ಲೇಖ?

ಸಿದ್ಧಾರ್ಥಕ—ಆರ್ಯ, ನನಗೆ ಗೊತ್ತಿಲ್ಲ.

ಭಾಗುರಾಯಣ—ಎಲಾ ಕಪಟಿ, ಲೇಖವನ್ನು ತೆಗೆದುಕೊಂಡು ಹೋಗುತ್ತಿದ್ದೀಯೆ, ಯಾರದು ಎಂದರೆ ಗೊತ್ತಿಲ್ಲ! . . . ಅದು ಹಾಗಿರಲಿ. ನಿನ್ನಿಂದ ಬಾಯಿಮಾತನ್ನು ಕೇಳತಕ್ಕವರು ಯಾರು?

ಸಿದ್ಧಾರ್ಥಕ—(ಭಯವನ್ನು ನಟಿಸಿ) ತಾವು . . .

ಭಾಗುರಾಯಣ—ಏನು, ನಾವೆ?

ಸಿದ್ಧಾರ್ಥಕ—ಅಲ್ಲ, ಅಲ್ಲ. ತಾವು ಹಿಡಿಸಿಹಾಕಿರುವಾಗ ಏನು ಹೇಳಬೇಕೋ ಗೊತ್ತಿಲ್ಲವೆಂದು ಹೇಳುತ್ತಿದ್ದೆ. ಅಷ್ಟರಲ್ಲಿ. . . .

ಭಾಗುರಾಯಣ—(ರೋಷದಿಂದ) ಇವನಿಗೆ ಗೊತ್ತಿದೆ. ಭಾಸುರಕ, ಇವನು ಹೇಳುವವರೆಗೂ ಚಾವಟಿಯಿಂದ ಏಟುಕೊಡಿಸು.

ಚಾರ—ಅಪ್ಪಣೆ. (ಕಾವಲುಗಾರರಿಗೆ ಸನ್ನೆ ಮಾಡುವನು. ಅವರು ಸಿದ್ಧಾರ್ಥಕನನ್ನು ಸ್ವಲ್ಪ ದೂರಕ್ಕೆ ಕರೆದುಕೊಂಡು ಹೋಗಿ, ಚಾವಟಿಯಿಂದ ನಾಲ್ಕು ಏಟು ಹೊಡೆಯುವರು. ಅಷ್ಟರಲ್ಲಿ ಸಿದ್ಧಾರ್ಥಕನು ಒಲೆದಾಡುತ್ತಿರುವಾಗ ಕಂಕುಳಿನಿಂದ ಪೆಟ್ಟಿಗೆ ಬೇರೆ ಬೀಳುವುದು. ಚಾರನ ಸನ್ನೆಯಂತೆ ಚಾವಟಿಗೆ ವಿಶ್ರಾಂತಿ ದೊರೆಯುವುದು. ಬಳಿಕ ಅವನು ಮುಂದೆ ಬಂದು) ಆರ್ಯ, ಇದೊಂದು ಪೆಟ್ಟಿಗೆ ಬೇರೆ ಬಿತ್ತು. (ತಂದು ಒಪ್ಪಿಸುವನು.)

ಭಾಗುರಾಯಣ—(ನೋಡಿ) ಕುಮಾರ, ಇದಕ್ಕೂ ರಾಕ್ಷಸನ ಮುದ್ರೆಯೇ ಆಗಿದೆ.

ಮಲಯಕೇತು—ಬರಿಯ ಲೇಖವನ್ನು ಕಳುಹಿಸಬಾರದೆಂದು ಜೊತೆಗೆ ಕಳುಹಿಸಿದ್ದು ಇದೇ ಆಗಿರಬೇಕು. ಇದನ್ನೂ ಮುದ್ರೆ ಕೆಡದಂತೆ ತೆರೆದು ತೋರಿಸು. (ಭಾಗುರಾಯಣನು ಬಾಯಿತೆರೆದು ಪೆಟ್ಟಿಗೆಯೊಳಗಿನಿಂದ ಆಭರಣಗಳನ್ನು ಎತ್ತಿ ತೋರಿಸುವನು.) ಆಹಾ, ಈ ಆಭರಣ ನನ್ನ ಮೈಮೇಲಿನಿಂದ ಕಳಚಿ ರಾಕ್ಷಸನಿಗೆ ಕಳುಹಿಸಿದ್ದು. ಸರಿ, ಲೇಖ ಚಂದ್ರಗುಪ್ತನಿಗೇ ಇರಬೇಕು.

ಭಾಗುರಾಯಣ—ಕುಮಾರ, ಈ ಸಂಶಯವನ್ನು ನಿರ್ಣಯಿಸಬಹುದಲ್ಲ! . . . ಎಲಾ, ಅವನನ್ನು ಮತ್ತೆ ಹೊಡೆಯಿರಿ.

ಚಾರ—ಅಪ್ಪಣೆ.

(ಚಾವಟಿಯ ಏಟು ಮತ್ತೆ ಪ್ರಾರಂಭವಾಗುವುದು. ನಾಲ್ಕು ಪೆಟ್ಟು ಬಿದ್ದಮೇಲೆ ಸಿದ್ಧಾರ್ಥಕನು ಕಿರಿಚುವನು.)

ಸಿದ್ಧಾರ್ಥಕ—ನಿಮ್ಮ ದಮ್ಮಯ್ಯ, ಸಾಕು. ಬಿಟ್ಟರೆ ಎಲ್ಲವನ್ನೂ ಅರಿಕೆ ಮಾಡುತ್ತೇನೆ. ಬಿಡಿಸಿ.

(ಭಾಗುರಾಯಣನು ಸಂಜ್ಞೆಮಾಡುವನು. ಏಟು ನಿಲ್ಲಿಸಿ, ಸಿದ್ಧಾರ್ಥಕನನ್ನು ಮುಂದಕ್ಕೆ ಕರೆತರುವರು.)

ಭಾಗುರಾಯಣ—ಹೇಳು ಹಾಗಾದರೆ.

ಸಿದ್ಧಾರ್ಥಕ—(ಮಲಯಕೇತುವಿನ ಚರಣಕ್ಕೆ ಅಡ್ಡಬಿದ್ದು) ನನಗೆ ಅಭಯದಾನ ಮಾಡಬೇಕು.

ಮಲಯಕೇತು—ಪರಾಧೀನನಿಗೆ ಅಭಯವಲ್ಲದೆ ಮತ್ತೇನು? ಇದ್ದದ್ದನ್ನು ಇದ್ದ ಹಾಗೆ ಅರಿಕೆಮಾಡು.

ಸಿದ್ಧಾರ್ಥಕ—ಲಾಲಿಸಬೇಕು. ಅಮಾತ್ಯ ರಾಕ್ಷಸರು ಈ ಲೇಖವನ್ನು ಕೊಟ್ಟು ಚಂದ್ರಗುಪ್ತನ ಬಳಿಗೆ ನನ್ನನ್ನು ಕಳುಹಿಸಿದರು.

ಮಲಯಕೇತು—ಬಾಯಿಮಾತು ಏನು? ಮೊದಲು ಹೇಳು.

ಸಿದ್ಧಾರ್ಥಕ—ಅಮಾತ್ಯರು ನನಗೆ ಹೀಗೆ ಹೇಳುವಂತೆ ಅಪ್ಪಣೆ ಮಾಡಿದ್ದರು: "ನನ್ನ ಮಿತ್ರರಾದ ಐದು ಜನ ದೊರೆಗಳಿಗೆ ನಿಮ್ಮಲ್ಲಿ ಸ್ನೇಹ ಹುಟ್ಟಿದೆ. ಅವರು ಯಾರೆಂದರೆ: ಕುಲೂತದೇಶದ ದೊರೆ ಚಿತ್ರವರ್ಮ, ಮಲಯನಗರದ ಸಿಂಹನಾದ, ಕಾಶ್ಮೀರದೇಶದ ಪುಷ್ಕರಾಕ್ಷ, ಸಿಂಧುದೇಶದ ಸಿಂಧುಷೇಣ, ಪಾರಸೀಕರ ಮೇಘನಾದ—ಇವರು. ಇವರಲ್ಲಿ ಮೊದಲ ಮೂರು ಜನ ಮಲಯಕೇತುವಿನ ರಾಜ್ಯವನ್ನು ಬಯಸುತ್ತಾರೆ. ಉಳಿದವರು ಅವನ ಗಜಸೈನ್ಯವನ್ನೂ ಭಂಡಾರವನ್ನೂ ಕೋರುತ್ತಾರೆ. ಚಾಣಕ್ಯನನ್ನು ನಿರಾಕರಿಸಿ ಮಹಾಶಯರು ನನ್ನನ್ನು ಒಲಿಸಿಕೊಂಡ ಹಾಗೆ ಇವರಿಗೂ ಈಗ ಹೇಳಿದ ಅಂಶಗಳನ್ನು ಸಾಧಿಸಿ ಕೊಟ್ಟು ಒಲಿಸಿಕೊಳ್ಳಬೇಕು."—ಇಷ್ಟೇ ಬಾಯಿಮಾತು.

ಮಲಯಕೇತು—(ತನ್ನಲ್ಲಿ) ನನ್ನ ಪ್ರಿಯಸಾಮಂತರಾದ ಚಿತ್ರವರ್ಮಾದಿಗಳೂ ನನಗೆ ದ್ರೋಹವನ್ನು ಬಗೆದಿದ್ದಾರೆಯೆ? . . . ಆಹಾ! ಅದರಿಂದಲೇ ಅವರಿಗೆ ರಾಕ್ಷಸನಲ್ಲಿ ಅಷ್ಟೊಂದು ಅಚ್ಚುಮೆಚ್ಚು! (ಪ್ರಕಾಶವಾಗಿ) ವಿಜಯೆ!

(ಪ್ರತೀಹಾರಿ ಪ್ರವೇಶಿಸುವಳು.)

ಮಲಯಕೇತು—ವಿಜಯೆ, ನಾನು ರಾಕ್ಷಸನನ್ನು ನೋಡಬೇಕು.

ಪ್ರತೀಹಾರಿ—ಅಪ್ಪಣೆ. (ಹೋಗುವಳು.)

ಭಾಗುರಾಯಣ—ಅಮಾತ್ಯರು ಬರುವ ವರೆಗೂ ಈ ಸಿದ್ಧಾರ್ಥಕನನ್ನು ದೂರದಲ್ಲಿ ಇರಿಸಿಕೊಂಡಿರಿ.

(ಎಲ್ಲರೂ ಮರೆಗೆ ಹೋಗುವರು.)

ಮಲಯಕೇತು—ಭಾಗುರಾಯಣ, ನಿನ್ನನ್ನು ಕೇಳಬೇಕೆಂದು ಬಂದ ಪ್ರಶ್ನೆಗೆ ಉತ್ತರ ತನ್ನಷ್ಟಕ್ಕೆ ತಾನೇ ಇಲ್ಲಿ ದೊರೆಯಿತು. ಘಳಿಗೆಘಳಿಗೆಗೂ ರಾಕ್ಷಸನ ಬಣ್ಣ ಬಯಲಾಗುತ್ತಿದೆ. ಕುಸುಮನಗರದಿಂದ ಬಂದ ಗೂಢಚಾರನ ಸಂಗಡ ಅವನು ಆಡಿದ ಮಾತನ್ನು ಕೇಳಿದಾಗಲೇ ಸ್ವಲ್ಪ ಸಂಶಯ ತಲೆದೋರಿತು. ಆದರೆ ಮಗನಿಗಿಂತಲೂ ಹೆಚ್ಚಾಗಿ ನಾನು ಗೌರವಿಸುತ್ತಿರುವಾಗ ನನಗೆ ದ್ರೋಹಮಾಡುವಷ್ಟು ನೀಚ ತನಕ್ಕೆ ಇಳಿಯಲಾರನೆಂದು ನೆಚ್ಚಿದ್ದೆ. . . . "ಚಂದ್ರಗುಪ್ತನು ನನ್ನ ಕೈಗೆ ಬಿದ್ದ ಹಾಗೆಯೇ ಸರಿ!" ಎಂದು ಆಗ ರಾಕ್ಷಸನಾಡಿದ ಮಾತಿಗೆ ಈಗ ಪ್ರತ್ಯಕ್ಷ ನಿದರ್ಶನ ದೊರೆಯಿತಲ್ಲ! ಈ ಮಿತ್ರಘಾತುಕನನ್ನು ಏನು ಮಾಡಿದರೆ ತೀರೀತು?

ಭಾಗುರಾಯಣ—ಕುಮಾರ, ಹೀಗೆ ದುಡುಕಬಾರದು. ಪ್ರತ್ಯಕ್ಷವಾದರೂ ಪರಾಮರ್ಶಿಸಬೇಕು. ಈ ಸೇವಕನು ಏಕೆ ಸುಳ್ಳುಹೇಳುತ್ತಿರಬಾರದು? ಒಬ್ಬರನ್ನೊಬ್ಬರು ಸಂಧಿಸುವಂತೆ ಮಾಡಿದರೆ ಸತ್ಯ ಹೊರಕ್ಕೆ ಬರುತ್ತದೆ. . . . ಏನೇ ಆಗಲಿ, ರಾಕ್ಷಸನ ಪ್ರಾಣಕ್ಕೆ ಕೈಹಾಕಬೇಡ. ಈಗಿನ ಸ್ಥಿತಿಯಲ್ಲಿ ನಮಗೆ ಅದರಿಂದ ತುಂಬ ಕೆಡುಕು.

ಮಲಯಕೇತು—ಆಗಲಿ, ಭಾಗುರಾಯಣ. ನಿನ್ನ ಮಾತನ್ನು ಮೀರುವುದಿಲ್ಲ. ನಿನ್ನ ನಿಷ್ಠೆಯನ್ನು ನೋಡಿ ಇವನ ದ್ರೋಹವನ್ನು ಸ್ವಲ್ಪ ಮರೆಯು ತ್ತೇನೆ. ನಿನ್ನಂಥ ಒಬ್ಬ ಮಿತ್ರನ ಪರಿಚಯ ನನಗಿಲ್ಲದಿದ್ದರೆ ಈ ಲೋಕಕ್ಕೆ ಲೋಕವೇ ನನಗೆ ದ್ರೋಹಮಯವಾಗಿ ಕಾಣಿಸು ತ್ತಿತ್ತು; ಎಲ್ಲ ಮಾನವರೂ ನನ್ನ ಕಣ್ಣಿನಲ್ಲಿ ಕೃತಘ್ನರೇ ಆಗುತ್ತಿದ್ದರು. ಈಗ, ನನ್ನೆದುರಿಗೆ ನೀನು ಇರುವಾಗ, ಹಾಗೆನ್ನಲಾರೆ. (ಹಾಗೆಯೇ ಚಿಂತಾಮಗ್ನನಾಗುವನು.)

ಭಾಗುರಾಯಣ—(ಆತ್ಮಜುಗುಪ್ಸೆಯನ್ನು ಕಷ್ಟದಿಂದ ಅದುಮಿ) ಕುಮಾರ, ಅದು ನಿನ್ನ ವಿಶ್ವಾಸ; ನಿನ್ನ ಅಭಿಮಾನಕ್ಕೆ ನಾನು ಎಳ್ಳಷ್ಟೂ ಅರ್ಹನಲ್ಲ. . . . (ತನ್ನಲ್ಲಿ) ಹಸುಗೂಸಿನಂತೆ ನನ್ನನ್ನು ನಂಬಿಕೊಂಡಿರುವ ಈ

ಕುಮಾರನಿಗೆ ಮೋಸಮಾಡುತ್ತಿದ್ದೇನಲ್ಲ! ಛೀ! ಛೀ! ಈ ಬಾಳನ್ನು ಸುಡಬೇಕು. . . . ಅಯ್ಯೋ, ಸ್ವಾಮಿಭಕ್ತಿಯೆ! . . . (ಸ್ವಲ್ಪ ಎಚ್ಚತ್ತು) ಹಾ! ಈಗ ಮರುಗಿದರೆ ಸ್ವಾಮಿದ್ರೋಹವಾದೀತು. . . . ಕುಲ ಲಜ್ಜೆ ಕೀರ್ತಿ ಮಾನಗಳ ಕಡೆಗೆ ಬೆನ್ನು ತಿರುಗಿಸಿದ್ದಾಯಿತು; ಹಣಕ್ಕಾಗಿ ದೇಹವನ್ನೂ ಆತ್ಮವನ್ನೂ ಮಾರಿಕೊಂಡದ್ದಾಯಿತು; ಹಿತವೋ ಅಹಿತವೋ, ವಿಚಾರಮಾಡದೆ ದಣಿಯ ಆಜ್ಞೆಯನ್ನು ಪಾಲಿಸುತ್ತಿರುವುದಾಯಿತು. . . . ಪರಾಧೀನನಿಗೆ ಧರ್ಮ ದಯೆಗಳ ಮಾತನ್ನು ಕಟ್ಟಿಕೊಂಡೇನು? . . .

(ಪ್ರತೀಹಾರಿಯೂ ರಾಕ್ಷಸನೂ ಪ್ರವೇಶಿಸುವರು. ರಾಕ್ಷಸನು ವರ್ತಕರಿಂದ ಕ್ರಯಕ್ಕೆ ಪಡೆದಿದ್ದ ಆಭರಣಗಳಲ್ಲಿ ಕೆಲವನ್ನು ಧರಿಸಿರುವನು. ಮಲಯಕೇತು ಭಾಗುರಾಯಣರು ಎಚ್ಚರಗೊಳ್ಳುವರು.)

ಪ್ರತೀಹಾರಿ—ಅಮಾತ್ಯರೇ, ಇದೋ ಕುಮಾರನಿದ್ದಾನೆ. ಹತ್ತಿರಕ್ಕೆ ದಯಮಾಡಿಸಬೇಕು.

ರಾಕ್ಷಸ—(ಮಲಯಕೇತುವನ್ನು ಸಮೀಪಿಸಿ) ಕುಮಾರ, ವಿಜಯೀಭವ.

ಮಲಯಕೇತು—ಆರ್ಯ, ಪ್ರಣಾಮಗಳು. ಈ ಪೀಠವನ್ನು ಸ್ವೀಕರಿಸಬೇಕು. (ರಾಕ್ಷಸನು ಕುಳಿತುಕೊಳ್ಳುವನು.) ಆರ್ಯನನ್ನು ನೋಡಿ ಬಹುಕಾಲವಾಗಿದ್ದುದರಿಂದ ನಮ್ಮ ಮನಸ್ಸಿಗೆ ಕಳವಳವಾಗಿತ್ತು.

ರಾಕ್ಷಸ—ಪ್ರಯಾಣದ ವ್ಯವಸ್ಥೆಯಲ್ಲೇ ತೊಡಗಿದ್ದ ಕಾರಣದಿಂದ ನಾನು ಈ ಮಾತನ್ನು ಕುಮಾರನಿಂದ ಕೇಳಬೇಕಾಯಿತು.

ಮಲಯಕೇತು—ಪ್ರಯಾಣದ ವ್ಯವಸ್ಥೆ ಹೇಗೆ ಹೇಗೆ? ನನಗೆ ಕೇಳುವ ಅಪೇಕ್ಷೆ ಹುಟ್ಟಿದೆ.

ರಾಕ್ಷಸ—ಕೈಕೆಳಗಿನ ರಾಜರಿಗೆ ಈ ರೀತಿ ನೇಮಿಸಿದ್ದಾಗಿದೆ: ಮಗಧ ಕಿರಾತಸೇನೆಗಳು ನನ್ನ ಸಂಗಡ ಸೈನ್ಯದ ಮುಂಭಾಗದಲ್ಲಿ ಹೊರಡತಕ್ಕದ್ದು. ಯವನರೂ ಗಾಂಧಾರರೂ ಸೈನ್ಯದ ಮಧ್ಯದಲ್ಲಿ ನಡೆಯತಕ್ಕದ್ದು. ಕೊನೆಯಲ್ಲಿ ಶಕರೂ ಹೂಣರೂ ಬರತಕ್ಕದ್ದು. ಕುಲೂತ ಮಲಯ ಕಾಶ್ಮೀರ ಸಿಂಧು ಪಾರಸೀಕರ ಸೇನೆಗಳು ಕುಮಾರನ ಅಂಗರಕ್ಷಣೆಯನ್ನು ನಿರ್ವಹಿಸತಕ್ಕದ್ದು.

ಮಲಯಕೇತು—(ತನ್ನಲ್ಲಿ) ಆಹಾ! ನನ್ನನ್ನು ಕೊಂದು ಚಂದ್ರಗುಪ್ತನನ್ನು ಮೆಚ್ಚಿಸತಕ್ಕವರೇ ನನ್ನ ಅಂಗರಕ್ಷಕರು! (ಪ್ರಕಾಶವಾಗಿ) ಆರ್ಯ, ಕುಸುಮಪುರಕ್ಕೆ ಹೋಗತಕ್ಕವರಾಗಲಿ ಅಲ್ಲಿಂದ ಬರತಕ್ಕವರಾಗಲಿ ಯಾರಾದರೂ ಉಂಟೋ?

ರಾಕ್ಷಸ—ಇನ್ನು ಮುಂದೆ ಹೋಗಿಬರುವವರಿಂದ ಏನು ಕೆಲಸ? ಒಂದೆರಡು ದಿನಗಳಲ್ಲಿ ನಾವೇ ಅಲ್ಲಿಗೆ ಸೇರುತ್ತೇವಲ್ಲ.

ಮಲಯಕೇತು—ತಿಳಿಯಿತು. ಹಾಗಾದರೆ—(ಸಿದ್ಧಾರ್ಥಕನಿದ್ದ ಕಡೆಗೆ ತಿರುಗಿ) ಆ ಭೃತ್ಯನೆಲ್ಲಿ? (ಚಾರನು ಮುಂದಕ್ಕೆ ಕರೆತರುತ್ತಲೂ ರಾಕ್ಷಸನಿಗೆ ತೋರಿಸಿ) ಇವನಿಗೆ ಆರ್ಯನು ಲೇಖವನ್ನು ಕೊಟ್ಟು ಕಳುಹಿಸಿದ್ದೇಕೆ?

ರಾಕ್ಷಸ—(ನೋಡಿ) ಇವನು ಸಿದ್ಧಾರ್ಥಕ! ಎಲಾ, ಇದೇನು?

ಸಿದ್ಧಾರ್ಥಕ—(ಕಣ್ಣೀರು ಸುರಿಸುತ್ತಾ, ನಾಚಿಕೆಯನ್ನು ನಟಿಸುತ್ತಾ) ಅಮಾತ್ಯರು ಪ್ರಸನ್ನರಾಗಬೇಕು. ನನ್ನನ್ನು ತುಂಬ ಹೊಡೆದರು; ರಹಸ್ಯವನ್ನು ಮುಚ್ಚಿಡುವುದಕ್ಕೆ ನನ್ನಿಂದ ಆಗಲಿಲ್ಲ.

ರಾಕ್ಷಸ—ಎಲಾ, ಯಾವುದು ಆ ರಹಸ್ಯ? ನನಗೆ ಅರ್ಥವಾಗಲಿಲ್ಲ.

ಸಿದ್ಧಾರ್ಥಕ—ನಾನು ಅರಿಕೆಮಾಡಿಕೊಂಡೆನಲ್ಲ: ನನ್ನನ್ನು ಹೊಡೆದದ್ದರಿಂದ . . . (ಅರೆಮಾತಿನಲ್ಲಿಯೇ ಭಯದಿಂದ ಮುಖ ತಗ್ಗಿಸುವನು.)

ಮಲಯಕೇತು—ಭಾಗುರಾಯಣ, ತನ್ನ ದಣಿ ಎದುರಿಗಿರುವುದರಿಂದ ಹೆದರಿಕೊಂಡೋ ನಾಚಿಕೊಂಡೋ ಇವನು ಹೇಳುತ್ತಿಲ್ಲ. ಆರ್ಯನಿಗೆ ನೀನೇ ತಿಳಿಸು.

ಭಾಗುರಾಯಣ—ಕುಮಾರನ ಅಪ್ಪಣೆ. ಅಮಾತ್ಯರೆ, ಇವನು ಹೇಳುತ್ತಾನೆ: ನೀವು ಕಾಗದಕೊಟ್ಟು ಬಾಯಿಮಾತನ್ನು ಹೇಳಿ ಚಂದ್ರಗುಪ್ತನ ಬಳಿಗೆ ಕಳುಹಿಸಿದಿರಂತೆ.

ರಾಕ್ಷಸ—ಚಂದ್ರಗುಪ್ತನ ಬಳಿಗೆ! . . . ಇದು ದಿಟವೆ, ಸಿದ್ಧಾರ್ಥಕ?

ಸಿದ್ಧಾರ್ಥಕ—(ನಾಚಿಕೆಯನ್ನು ನಟಿಸಿ) ತುಂಬ ಹೊಡೆದದ್ದರಿಂದ ನಾನು ಹೀಗೆ ಹೇಳಿದ್ದುಂಟು.

ರಾಕ್ಷಸ—ಇದು ಸುಳ್ಳು. ಹೊಡೆತಕ್ಕೆ ಸಿಕ್ಕಿದವನು ಏನನ್ನು ತಾನೆ ಹೇಳಲಾರ?

ಮಲಯಕೇತು—ಭಾಗುರಾಯಣ, ಲೇಖವನ್ನು ತೋರಿಸು. ಬಾಯಿಮಾತನ್ನಲ್ಲವೆ ಈ ಭೃತ್ಯನು ಹೇಳತಕ್ಕದ್ದು ?

(ಭಾಗುರಾಯಣನು ಲೇಖವನ್ನು ಕೊಡುವನು.)

ರಾಕ್ಷಸ—(ಓದಿಕೊಂಡು) ಕುಮಾರ, ಇದು ಶತ್ರುಗಳ ತಂತ್ರ.

ಮಲಯಕೇತು—ಬರಿಯ ಲೇಖವನ್ನು ಕಳುಹಿಸಬಾರದೆಂದು ಜೊತೆಯಲ್ಲಿ ಈ ಆಭರಣಗಳನ್ನೂ ಕಳುಹಿಸಿರುವಾಗ ಇದು ಶತ್ರುಗಳ ತಂತ್ರ ಹೇಗಾದೀತು ? (ಆಭರಣಗಳ ಕಡೆ ತೋರಿಸುವನು.)

ರಾಕ್ಷಸ—(ಆಭರಣಗಳನ್ನು ನೋಡಿ) ಕುಮಾರನು ನನಗೆ ಕಳುಹಿಸಿದ್ದವು ಇವು. ನಾನು ಒಂದು ಉಚಿತ ಸಂದರ್ಭದಲ್ಲಿ • ಸಿದ್ಧಾರ್ಥಕನಿಗೆ ಪಾರಿತೋಷಿಕವಾಗಿ ಕೊಟ್ಟೆನು.

ಭಾಗುರಾಯಣ—ಇಂಥ ಭೂಷಣಗಳಿಗೆ—ಅದರಲ್ಲೂ ಕುಮಾರನೇ ತನ್ನ ದೇಹದಿಂದ ಕಳಚಿಕೊಟ್ಟು ದಯಪಾಲಿಸಿದವುಗಳಿಗೆ—ಇವನೋ ದಾನಕ್ಕೆ ತಕ್ಕ ಪಾತ್ರ ?

ಮಲಯಕೇತು—ಬಾಯಿಮಾತನ್ನು ಇವನಿಂದ ಕೇಳಬೇಕೆಂದೂ ಆರ್ಯನು ಬರೆದಿಲ್ಲವೆ ?

ರಾಕ್ಷಸ—(ಸ್ಥೈರಣೆಗೆಟ್ಟು) ಎಲ್ಲಿಯ ಬಾಯಿಮಾತು, ಯಾರಿಗೆ ಬಾಯಿಮಾತು ? ಲೇಖವೇ ಮೊದಲು ನನ್ನದಲ್ಲ.

ಮಲಯಕೇತು—ಹಾಗಾದರೆ ಈ ಮುದ್ರೆ ಯಾರದು ? (ತೋರಿಸುವನು.)

ರಾಕ್ಷಸ—ಕಪಟಮುದ್ರೆಯನ್ನು ಸೃಷ್ಟಿಸುವುದು ತಂತ್ರಿಗಳಿಗೆ ಕಷ್ಟವಲ್ಲ.

ಭಾಗುರಾಯಣ—ಕುಮಾರ, ಅಮಾತ್ಯರು ಅರಿಕೆಮಾಡುವುದು ನ್ಯಾಯವಾಗಿದೆ. ಸಿದ್ಧಾರ್ಥಕ, ಈ ಲೇಖವನ್ನು ಬರೆದವರು ಯಾರು ? (ಸಿದ್ಧಾರ್ಥಕನು ರಾಕ್ಷಸನ ಮುಖವನ್ನು ನೋಡಿ ಸುಮ್ಮನೆ ತಲೆತಗ್ಗಿಸಿಕೊಂಡು ನಿಲ್ಲುವನು.) ಎಲಾ, ಏಟುತಿಂದದ್ದು ಸಾಕು; ಮತ್ತೆ ಬೇಡ, ಹೇಳಿಬಿಡು.

ಸಿದ್ಧಾರ್ಥಕ—ಆರ್ಯ, ಬರೆದವನು ಶಕಟದಾಸ.

ರಾಕ್ಷಸ—ಕುಮಾರ, ಇದು ಶಕಟದಾಸನು ಬರೆದದ್ದಾದರೆ, ನಾನು ಬರೆದಂತೆಯೇ.

ಮಲಯಕೇತು—ವಿಜಯೆ, ನಾನು ಶಕಟದಾಸನನ್ನು ನೋಡಬೇಕು.

ಪ್ರತೀಹಾರಿ—ಅಪ್ಪಣೆ. (ಹೊಗಡುವಳು.)

ಭಾಗುರಾಯಣ—ವಿಜಯೆ, ಸ್ವಲ್ಪ ತಡೆ. ಕುಮಾರ, ಅಮಾತ್ಯರ ಎದುರಿಗೆ ಶಕಟದಾಸನು, "ನಾನು ಬರೆದದ್ದಲ್ಲ ಇದು" ಎಂದು ಹೇಳಿದರೂ ಹೇಳಬಹುದು. ಆದ್ದರಿಂದ ಅವನ ಕೈಬರೆಹದ ಇನ್ನೊಂದು ಪತ್ರವನ್ನು ತರಲಿ. ಅಕ್ಷರಗಳನ್ನು ಹೋಲಿಸಿ ನೋಡಿದರೆ ಗೊತ್ತಾಗುತ್ತದೆ.

ಮಲಯಕೇತು—(ಒಪ್ಪಿ) ವಿಜಯೆ, ಹಾಗೆಯೇ ಮಾಡು.

ಭಾಗುರಾಯಣ—ಮುದ್ರಿಕೆಯನ್ನೂ ತರಿಸಿ ನೋಡಬಹುದು.

ಮಲಯಕೇತು—ಎರಡನ್ನೂ ತೆಗೆದುಕೊಂಡು ಬೇಗ ಬಾ.

ಪ್ರತೀಹಾರಿ—ಅಪ್ಪಣೆ. (ಹೋಗುವಳು.)

(ಮಲಯಕೇತು ರಾಕ್ಷಸನನ್ನೂ ರಾಕ್ಷಸನು ಮಲಯಕೇತುವನ್ನೂ ಕೊಂಚ ಕಾಲ ದಿಟ್ಟಿಸಿ ನೋಡುವರು.)

ಮಲಯಕೇತು—(ರಾಕ್ಷಸನು ಧರಿಸಿದ್ದ ಆಭರಣಗಳನ್ನು ಕಂಡು ಗುರುತಿಸಿ) ಆರ್ಯ, ಈ ಆಭರಣಗಳು ಎಲ್ಲಿಯವು? ಸತ್ಯವಂತನು ಕಳುಹಿಸಿದ ಮೂರು ಅಲಂಕಾರಗಳಲ್ಲಿ ಕೆಲವೊ?

ರಾಕ್ಷಸ—ಕುಮಾರ, ನಿರ್ಣಯಕ್ಕೆ ಮುಂಚೆ ಅಪರಾಧಿಯನ್ನು ಕೂಡ ಹೀಗೆ ಮೂದಲಿಸುವುದಿಲ್ಲ. . . . ವರ್ತಕರಿಂದ ಕ್ರಯಕ್ಕೆ ಪಡೆದ ಆಭರಣಗಳಿವು. ನನ್ನ ಬಳಿ ಇದ್ದವನ್ನು ಮೊದಲೇ ವಿನಿಯೋಗಿಸಿದ್ದರಿಂದ ಈ ದಿನ ಇವನ್ನು ಧರಿಸಬೇಕಾಯಿತು.

ಮಲಯಕೇತು—ವರ್ತಕರಿಂದ ಕ್ರಯಕ್ಕೆ ಪಡೆದದ್ದೊ? . . . .

(ಅಷ್ಟರಲ್ಲಿ ವಿಜಯೆ ಪ್ರವೇಶಿಸಿ ಒಂದು ಪತ್ರವನ್ನೂ ಮುದ್ರಿಕೆಯನ್ನೂ ಮಲಯಕೇತುವಿನ ಕೈಗೆ ಕೊಡುವಳು.)

ಮಲಯಕೇತು—(ತನ್ನ ಬಳಿಯಿದ್ದ ಲೇಖವನ್ನೂ ಅವಳು ತಂದದ್ದನ್ನೂ ಹೋಲಿಸಿ) ಆರ್ಯ, ಅಕ್ಷರಗಳು ಹೊಂದುತ್ತವೆ, ನೋಡಬಹುದು.

ರಾಕ್ಷಸ—(ಅರ್ಧ ತನ್ನಲ್ಲಿ) ಹಾ! ಅಕ್ಷರಗಳು ಹೊಂದುತ್ತವೆ. ಶಕಟದಾಸನು ಮಿತ್ರನೆಂಬ ಅಕ್ಷರಗಳು? . . . . (ತನ್ನಲ್ಲಿ) ಶಕಟದಾಸನು ಹೆಂಡತಿ

ಮಕ್ಕಳನ್ನು ನೆನೆದು ಸ್ವಾಮಿಭಕ್ತಿಯನ್ನು ಮರೆತಿರಬಹುದೆ? ಸ್ಥಿರವಾದ ಕೀರ್ತಿಯನ್ನು ಬಿಟ್ಟು ಚಂಚಲವಾದ ಹಣಕ್ಕೆ ಕೈಯೊಡ್ಡಿರಬಹುದೆ? . . . ಆಹಾ! ಸಂದೇಹವೇಕೆ? ಮುದ್ರಿಕೆ ಅವನ ಬಳಿಯಲ್ಲೇ ಇತ್ತು. ಸಿದ್ಧಾರ್ಥಕನೂ ಅವನೂ ಮಿತ್ರರು. ಅಕ್ಷರವೂ ಅವನದು. ಶತ್ರುಗಳ ಭೇದಕ್ಕೆ ಒಳಗಾಗಿ ಪ್ರಾಣದ ಆಸೆಯಿಂದ ಹೀಗೆ ಮಾಡಿರಬೇಕು. . . .

ಮಲಯಕೇತು—(ರಾಕ್ಷಸನ ಆಭರಣಗಳನ್ನೇ ನೋಡುತ್ತಾ) ಆರ್ಯ, ಶಕಟದಾಸನ ಮಾತಿರಲಿ. ಈ ಆಭರಣಗಳ ವಿಚಾರವೇನು? . . . (ಥಟ್ಟನೆ ತಿರುಗಿ) ವಿಜಯೆ, ಆರ್ಯನು ಧರಿಸಿರುವ ಆಭರಣಗಳನ್ನು ನೀನು ಬಲ್ಲೆಯ?

ಪ್ರತೀಹಾರಿ—(ದಿಟ್ಟಿಸಿ ನೋಡಿ) ಕುಮಾರ, ಹೇಗೆ ಮರೆಯಬಲ್ಲೆ? ಇವನ್ನು ಗತಿಸಿದ ಮಹಾಸ್ವಾಮಿಯವರು ಧರಿಸುತ್ತಿರಲಿಲ್ಲವೆ?

ಮಲಯಕೇತು—(ಕಣ್ಣೀರು ತುಂಬಿ) ಹಾ ತಂದೆ! ಈ ವಜ್ರದ ಹಾರವನ್ನು ಧರಿಸಿಕೊಂಡು ಸಿಂಹಾಸನದ ಮೇಲೆ ನೀನು ಕುಳಿತಾಗ, ತಾರೆಗಳು ಸುತ್ತುಗಟ್ಟಿದ ಶರಚ್ಚಂದ್ರನಂತೆ ನಿನ್ನ ಮುಖ ಹೊಳೆಯುತ್ತಿದ್ದಿತಲ್ಲ!

ರಾಕ್ಷಸ—(ತನ್ನಲ್ಲಿ) ಏನು, ಪರ್ವತೇಶ್ವರನು ಧರಿಸುತ್ತಿದ್ದವುಗಳೇ! (ನೋಡಿಕೊಂಡು) ಅವನ ಭೂಷಣಗಳೇ ಆಗಿರಬೇಕು. ಇನ್ನು ಇವರು ಯಾವ ದೋಷವನ್ನು ಆರೋಪಿಸಿದರೂ ಅಲ್ಲವೆನ್ನುವ ಹಾಗಿಲ್ಲ! . . . (ಪ್ರಕಾಶವಾಗಿ) ಕುಮಾರ, ಇವುಗಳನ್ನು ಚಾಣಕ್ಯನೇ ವರ್ತಕರ ಮೂಲಕ ನನಗೆ ಮಾರಿಸಿರಬೇಕು.

ಮಲಯಕೇತು—ಆರ್ಯ, ನಮ್ಮ ತಂದೆ ಧರಿಸುತ್ತಿದ್ದವು, ಅದರಲ್ಲೂ ಚಂದ್ರಗುಪ್ತನ ಕೈಗೆ ಸಿಕ್ಕಿದ್ದವು—ಇಂಥವನ್ನು ವರ್ತಕರು ಮಾರಿದರೆಂದರೆ ಒಪ್ಪುವ ಹಾಗಿಲ್ಲ. . . . ಅಲ್ಲ, ಒಪ್ಪತಕ್ಕದ್ದೇ ಸರಿ. ಏಕೆಂದರೆ ನೋಡು: ಹೆಚ್ಚು ಲಾಭವನ್ನು ಪಡೆಯಲು ಬಯಸಿ ಚಂದ್ರಗುಪ್ತನು ನಿನಗೆ ಮಾರಿದನು. ಕ್ರೂರನಾದ ನೀನು ಇವಕ್ಕೆ ನನ್ನನ್ನೇ ಬೆಲೆಯಾಗಿ ಮಾಡಿದೆ.

ರಾಕ್ಷಸ—(ತನ್ನಲ್ಲಿ) ಆಹಾ! ಶತ್ರುಗಳ ತಂತ್ರ ಚೆನ್ನಾಗಿಯೇ ಹತ್ತಿ

ಕೊಂಡಿತು. ಲೇಖ ನನ್ನದಲ್ಲ ಎನ್ನುವುದಕ್ಕೆ ಮುದ್ರಿಕೆ ನನ್ನದೇ ಆಗಿದೆ; ಶಕಟದಾಸನ ಸಂಗಡ ಮೈತ್ರಿ ತಪ್ಪಿಹೋಗಿದೆಯೆಂದರೆ ಹೇಗೆ ನಂಬಲಾದೀತು? ರಾಜನಾದ ಚಂದ್ರಗುಪ್ತನು ಆಭರಣಗಳನ್ನು ಮಾರಿಯಾನೆಂದು ಯಾರುತಾನೆ ಎಣಿಸಿಯಾರು?—ತೋರಿದ ಉತ್ತರವನ್ನು ಕೊಡುವುದಕ್ಕಿಂತಲೂ ಸಮ್ಮತಿಸುವುದೇ ಈಗ ಉತ್ತಮ.

ಮಲಯಕೇತು—ಆರ್ಯ, ಒಂದು ಮಾತು ಕೇಳಬೇಕಾಗಿದೆ.

ರಾಕ್ಷಸ—(ಕಂಬನಿದುಂಬಿ) ಕುಮಾರ, ಯಾರು ಆರ್ಯನೋ ಅವನನ್ನು ಕೇಳು. ನಾನು ಈಗ ಅನಾರ್ಯನಾದೆ.

ಮಲಯಕೇತು—ಏತಕ್ಕಾಗಿ ಅನಾರ್ಯನಾದೆ?—ಮೌರ್ಯನು ನಿನಗೆ ಸ್ವಾಮಿಯ ಮಗ, ನಾನು ಮಿತ್ರನ ಮಗ. ಅವನು ನಿನಗೆ ಹಣವನ್ನು ದಯಪಾಲಿಸತಕ್ಕವನು. ನನಗೆ ನೀನು ಇಷ್ಟಬಂದಾಗ ಕೊಟ್ಟರುಂಟು. ಅಲ್ಲಿ ನಿನಗೆ ಮಂತ್ರಿಪದವಿ ಗೌರವದ ದಾಸ್ಯ; ಇಲ್ಲಿ ನಿನ್ನದೇ ಪೂರ್ಣಪ್ರಭುತ್ವ. ಹೀಗಿರುವಾಗ ಯಾವ ಹೆಚ್ಚಿನ ಸ್ವಾರ್ಥಕ್ಕೆ ಆಸೆಪಟ್ಟು ಅನಾರ್ಯನಾದೆ? ಹೇಳು.

ರಾಕ್ಷಸ—ಕುಮಾರ, ಈ ಅಸಂಗತವಾದ ಮಾತಿನಿಂದಲೇ ನಿರ್ಣಯವನ್ನು ಕೊಟ್ಟಿದ್ದೀಯಲ್ಲ! ಯಾವ ಹೆಚ್ಚಿನ ಸ್ವಾರ್ಥಕ್ಕೆ ಆಸೆಪಟ್ಟು ನಾನು ಅನಾರ್ಯನಾಗಿರಬಹುದು? . . . ಆಗಲಿ, ನಿನ್ನದೇನು ದೋಷ! . . .

ಮಲಯಕೇತು—(ಲೇಖವನ್ನೂ ಅಲಂಕಾರದ ಪೆಟ್ಟಿಗೆಯನ್ನೂ ತೋರಿಸಿ) ಹಾಗಾದರೆ ಇದೆಲ್ಲವೂ ಏನು?

ರಾಕ್ಷಸ—(ದುಃಖದಿಂದ) ವಿಧಿಯ ವಿಲಾಸ! ನಾನು ಭೃತ್ಯಮಾತ್ರನಾಗಿದ್ದರೂ ಕಡೆಗಣಿಸದೆ, ಮಕ್ಕಳಿಗಿಂತಲೂ ಮಿಗಿಲಾಗಿ ಪ್ರೀತಿಯಿಂದ ಕಾಣುತ್ತಿದ್ದ ನನ್ನ ಪ್ರಭುಗಳನ್ನು—ಲೋಕಸ್ವಭಾವಜ್ಞರಾದ ಆ ನಂದರನ್ನು—ಯಾವುದು ನಿರ್ಮೂಲ ಮಾಡಿತೋ ಅದರ ವಿಲಾಸ! ಪುರುಷಪ್ರಯತ್ನಕ್ಕೆ ಕುಠಾರವಾದ ಆ ವಿಧಿಯ ವಿಲಾಸ!

ಮಲಯಕೇತು—(ರೋಷದಿಂದ) ಇನ್ನೂ ಬಾಯಿ ಬಡಿಯಬಹುದೆ? ಇದು ವಿಧಿಯ ವಿಲಾಸವೋ; ಲೋಭದ ವಿಲಾಸವಲ್ಲವೋ? . . .

ಅನಾರ್ಯ! ಕೃತಘ್ನ! ಹಿಂದೆ ವಿಷಕನ್ಯೆಯನ್ನು ಪ್ರಯೋಗಿಸಿ, ನಿನ್ನಲ್ಲಿ ನಂಬಿಕೆಯಿಟ್ಟಿದ್ದ ನನ್ನ ತಂದೆಯನ್ನು ಕೀರ್ತಿಶೇಷನನ್ನಾಗಿ ಮಾಡಿಬಿಟ್ಟೆ. ಈಗ, ದಿಕ್ಕಿಲ್ಲದ ನಿನಗೆ ಗೌರವವಿತ್ತು ಆಶ್ರಯಕೊಟ್ಟ ನನ್ನನ್ನು ಮಾಂಸದಂತೆ ಶತ್ರುವಿಗೆ ವಿಕ್ರಯಿಸಬೇಕೆಂದಿದ್ದೀಯೆ.

ರಾಕ್ಷಸ—(ತನ್ನಲ್ಲಿ) ಇದು ಕುರುವಿನ ಮೇಲೆ ಮತ್ತೊಂದು ಬೊಕ್ಕೆ! (ಪ್ರಕಾಶವಾಗಿ, ಕಿವಿ ಮುಚ್ಚಿಕೊಂಡು) ಶಾಂತಂ ಪಾಪಂ, ಶಾಂತಂ ಪಾಪಂ! ಪರ್ವತೇಶ್ವರನಲ್ಲಿಗೆ ವಿಷಕನ್ಯೆಯನ್ನು ಪ್ರಯೋಗಿಸಿದವನು ನಾನಲ್ಲ!

ಮಲಯಕೇತು—ಹಾಗಾದರೆ, ನನ್ನ ತಂದೆಯನ್ನು ಕೊಂದವನು ಯಾರು?

ರಾಕ್ಷಸ—ಇದಕ್ಕೆ ದೈವವನ್ನು ಕೇಳಬೇಕು.

ಮಲಯಕೇತು—(ಕ್ರೋಧದಿಂದ) ಇದಕ್ಕೆ ದೈವವನ್ನು ಕೇಳಬೇಕು! ಕ್ಷಪಣಕ ಜೀವಸಿದ್ಧಿಯನ್ನಲ್ಲ?

ರಾಕ್ಷಸ—(ತನ್ನಲ್ಲಿ) ಏನು, ಜೀವಸಿದ್ಧಿಯೂ ಚಾಣಕ್ಯನ ಗೂಢಚಾರನೇ? ಅಯ್ಯೋ, ಶತ್ರುಗಳು ನನ್ನ ಹೃದಯವನ್ನೇ ಆಕ್ರಮಿಸಿದಂತಾಯಿತು!

ಮಲಯಕೇತು—(ಕ್ರೋಧದಿಂದ) ಭಾಸುರಕ, ಶಿಖರಸೇನನಿಗೆ ಹೀಗೆ ಆಜ್ಞಾಪಿಸು: ರಾಕ್ಷಸನ ಸಂಗಡ ಸ್ನೇಹ ಬೆಳಸಿ, ನಮಗೆ ದ್ರೋಹವನ್ನಾಚರಿಸಿ ಚಂದ್ರಗುಪ್ತನನ್ನು ಮೆಚ್ಚಿಸಬೇಕೆಂದಿರುವ ರಾಜರು ಈ ಐದು ಜನ—ಕುಲೂತಪತಿ ಚಿತ್ರವರ್ಮ, ಮಲಯಪತಿ ಸಿಂಹನಾದ, ಕಾಶ್ಮೀರಪತಿ ಪುಷ್ಕರಾಕ್ಷ, ಸಿಂಧುಪತಿ ಸಿಂಧುಷೇಣ, ಪಾರಸೀಕಪತಿ ಮೇಘನಾದ. ಇವರಲ್ಲಿ ಮೊದಲ ಮೂರು ಜನ ಭೂಮಿಯನ್ನು ಬಯಸುವವರು: ಅವರನ್ನು ಆಳವಾದ ಕಮರಿಗೆ ತಳ್ಳಿಸಿ ಮಣ್ಣುಮುಚ್ಚಿಸಿಬಿಡೆಂದು ಹೇಳು. ಇನ್ನಿಬ್ಬರು ಗಜಸೇನೆಯನ್ನು ಕೋರುವವರು: ಅವರನ್ನು ಆನೆಯ ಕಾಲಿಗೆ ಕಟ್ಟಿಸಿ ಎಳಸಿ ಕೊಲ್ಲಿಸಿಬಿಡೆಂದು ಹೇಳು.

ಚಾರ—ಅಪ್ಪಣೆ (ಹೋಗುವನು.)

ಮಲಯಕೇತು—(ರಾಕ್ಷಸನ ಕಡೆ ತಿರುಗಿ) ರಾಕ್ಷಸ, ರಾಕ್ಷಸ! ನಿನಗೆ ಎಂಥ ಶಿಕ್ಷೆಯನ್ನು ವಿಧಿಸಿದರೂ ತೀರದು. (ಭಾಗುರಾಯಣನು ಮಲಯ

ಕೇತುವಿನ ಕಡೆ ನೋಡುವನು.) ಆದರೆ ನಾನು ವಿಶ್ವಾಸದ್ರೋಹಿಯಾದ ರಾಕ್ಷಸನಲ್ಲ; ನಾನು ಮಲಯಕೇತು. ಹೋಗು, ಹೋಗು. ಮನಸ್ಸು ದಣಿಯೆ ಚಂದ್ರಗುಪ್ತನನ್ನೇ ಆಶ್ರಯಿಸು. ಚಾಣಕ್ಯ ಮೌರ್ಯರಿಬ್ಬರನ್ನೂ ನೀನು ಕಟ್ಟಿಕೊಂಡು ಬಂದರೂ ನಿಮ್ಮನ್ನು ಉಚ್ಛೇದಿಸುವ ಶಕ್ತಿ ನನಗುಂಟು.

ಭಾಗುರಾಯಣ—ಕುಮಾರ, ಕಾಲಹರಣ ಸಾಕು. ಇನ್ನು ಕುಸುಮಪುರವನ್ನು ಮುತ್ತುವುದಕ್ಕೆ ನಮ್ಮ ಸೈನ್ಯಗಳನ್ನು ಸಜ್ಜುಗೊಳಿಸಬೇಕಲ್ಲವೆ?

ಮಲಯಕೇತು—(ವ್ಯಗ್ರನಾಗಿ) ಆಗಲಿ. (ಹೊರಡುವನು.)

(ರಾಕ್ಷಸನು ಹೊರತು, ಎಲ್ಲರೂ ಹಿಂಬಾಲಿಸುವರು. ಸಿದ್ಧಾರ್ಥಕನೂ ಮರೆಯಾಗುವನು.)

ರಾಕ್ಷಸ—(ಆವೇಗದಿಂದ) ಅಯ್ಯೋ, ಏನು ವಿಪತ್ತು ಬಂದಿತು? ಪಾಪ! ನಿರಪರಾಧಿಗಳಾದ ಚಿತ್ರವರ್ಮಾದಿಗಳೂ ಹತರಾದರೆ! ಇದೇನು ವಿಚಿತ್ರ? ರಾಕ್ಷಸನು ಮಾಡುವುದೆಲ್ಲಾ ಮಿತ್ರವಿನಾಶಕ್ಕಾಯಿತೇ ಹೊರತು ಶತ್ರುವಿನಾಶಕ್ಕಲ್ಲ! . . . ನಿರ್ಭಾಗ್ಯನಾದ ನಾನು ಈಗ ಏನುಮಾಡಲಿ? ತಪೋವನಕ್ಕೆ ಹೋಗಲೆ? ವೈರ ತುಂಬಿದ ಈ ಮನಸ್ಸಿಗೆ ತಪಸ್ಸಿನಿಂದ ಶಾಂತಿ ಬರುವುದಿಲ್ಲ. ಶತ್ರುಗಳು ಜೀವಿಸಿರುವಾಗಲೇ ನಾನು ನನ್ನ ಪ್ರಭುಗಳನ್ನು ಹಿಂಬಾಲಿಸಲೆ? ಇದು ಹೇಡಿಗಳಿಗೆ ತಕ್ಕ ಕೃತ್ಯ. ಕತ್ತಿಯನ್ನು ಹಿರಿದು ಒಬ್ಬನೇ ಶತ್ರುಸೈನ್ಯದ ಮೇಲೆ ನುಗ್ಗಲೆ? ಇದೂ ಯುಕ್ತವಲ್ಲ. . . . ಓ ಹೃದಯವೇ, ನೀನು ಕೃತಘ್ನನಲ್ಲದಿದ್ದರೆ ಚಂದನದಾಸನ ಬಿಡುಗಡೆಯ ಕಡೆಗೆ ಮೊದಲು ಹರಿಯಬೇಡವೆ? . . .

ತೆರೆ.

# ಆರನೆಯ ಅಂಕ

## ದೃಶ್ಯ : ೧

(ಕುಸುಮಪುರದಲ್ಲಿ ಒಂದು ಬೀದಿ. ಸಿದ್ಧಾರ್ಥಕನು ರಾಜಮರ್ಯಾದೆಯನ್ನು ಪಡೆದು ಹರ್ಷದಿಂದ ಬರುತ್ತಿರುವನು.)

ಸಿದ್ಧಾರ್ಥಕ—ಸಮಿದ್ಧಾರ್ಥಕನು ಮನೆಯಲ್ಲೇನು ಇರುತಾನ್ಸೋ ಇಲ್ಲವ್ರೋ? ಆರ್ಯ ಚಾಣಕ್ಯರ ಅಪ್ಪಣೆಯನ್ನು ಬೇಗ ತಿಳಿಸಬೇಕು. ಅಲ್ಲದೆ ಅವನಿಗೆ ಈ ವೈಭವವನ್ನೆಲ್ಲಾ ತೋರಿಸಿದ ಹೊರತು ನನ್ನ ಮನಸ್ಸಿಗೆ ಸಮಾಧಾನವೆಲ್ಲಿ? (ಎದುರಿಗೆ ನೋಡಿ) ಎಲಾ, ನೆನಸಿಕೊಂಡ ಹೊತ್ತಿಗೆ ಸರಿಯಾಗಿ ಇಲ್ಲೇ ಬಂದ! ಯಾವ ರಾಜಕಾರ್ಯದ ಮೇಲೆ ಹೊರಟನೋ?

(ಸಮಿದ್ಧಾರ್ಥಕನು ಎದುರಿಗೆ ಪ್ರವೇಶಿಸುವನು.)

ಸಿದ್ಧಾರ್ಥಕ—ಸಮಿದ್ಧಾರ್ಥಕ, ನಿನಗೆ ಶತಾಯುಸ್ಸು!

ಸಮಿದ್ಧಾರ್ಥಕ—(ಕತ್ತೆತ್ತಿ ನೋಡಿ) ಓಹೋ ಸಿದ್ಧಾರ್ಥಕ! ಏನಯ್ಯಾ, ಯಾವಾಗ ಬಂದೆ? ಕ್ಷೇಮವೆ? (ಇಬ್ಬರೂ ಸಮೀಪಿಸಿ ಸ್ನೇಹದಿಂದ ಒಬ್ಬರನ್ನೊಬ್ಬರು ಆಲಿಂಗಿಸುವರು.)

ಸಿದ್ಧಾರ್ಥಕ—ಇಗೋ ಇಷ್ಟರ ಮಟ್ಟಿಗೆ. ನೀನು ಸುಖವಾಗಿದ್ದೀಯಾ?

ಸಮಿದ್ಧಾರ್ಥಕ—ಸುಖವೆಲ್ಲಿ ಬಂತು ನನಗೆ, ಬಹುಕಾಲದ ಮೇಲೆ ಊರಿಗೆ ಬಂದ ನೀನು ನಮ್ಮ ಮನೆಯ ಕಡೆಗೆ ಇನ್ನೂ ಹಣಿಕಿ ನೋಡದಿದ್ದರೆ?

ಸಿದ್ಧಾರ್ಥಕ—ಸಿಟ್ಟು ಮಾಡಿಕೊಳ್ಳಬೇಡ. ಈಗ ನಿಮ್ಮ ಮನೆಗೇ ಬರುತ್ತಿದ್ದೆ. ನಾನು ಇಲ್ಲಿಗೆ ಬಂದವನೇ ಆರ್ಯಚಾಣಕ್ಯರ ಬಳಿಗೆ ಹೋಗಿ ವರದಿ ಒಪ್ಪಿಸಿದೆ. ಅವರು "ಈ ಕ್ಷಣವೇ ಹೋಗಿ ಮಹಾರಾಜರಿಗೆ ಈ ಪ್ರಿಯವಾರ್ತೆಯನ್ನು ತಿಳಿಸು" ಎಂದು ಅಪ್ಪಣೆ ಮಾಡಿದರು. ಮಹಾರಾಜರು ಕೇಳಿ ಸಂತೋಷಪಟ್ಟು ಇದನ್ನೆಲ್ಲಾ ದಯಪಾಲಿಸಿ

ದರು. (ವಸ್ತ್ರಾಭರಣಗಳನ್ನು ತೋರಿಸುವನು.) ನೀನು ನೋಡಿ ಸಂತೋಷ ಪಡಲಿ ಎಂದು ಅಲ್ಲಿಂದ ಹಾಗೆಯೇ ನಿನ್ನನ್ನು ಹುಡುಕಿಕೊಂಡು ಬರುತ್ತಿದ್ದೇನೆ. ನೀನೆಲ್ಲಿಗೆ ಹೊರಟಿದ್ದೆ ?

ಸಮಿದ್ಧಾರ್ಥಕ—ನೀನು ಬಂದೆಯೆಂದು ಕೇಳಿದೆ; ಎಷ್ಟು ಕಾದರೂ ನೀನಂತೂ ನಮ್ಮ ಮನೆಗೆ ಬರಲಿಲ್ಲ. ಮನಸ್ಸು ನಿಲ್ಲದೆ ನಾನೇ ಹುಡುಕಿಕೊಂಡು ಹೊರಟಿದ್ದೆ. . . . ಅದಿರಲಿ. ಯಾವುದು ಆ ಪ್ರಿಯವಾರ್ತೆ, ಮಹಾರಾಜರಿಗೆ ನೀನು ತಿಳಿಸಿದ್ದು ? ನಾನೂ ಕೇಳಬಹುದಾಗಿದ್ದರೆ ಹೇಳು.

ಸಿದ್ಧಾರ್ಥಕ—ನಿನಗೆ ಹೇಳಬಾರದ್ದು ಯಾವುದಿದೆ? ಅಲ್ಲದೆ, ಅದು ಈಗ ರಹಸ್ಯವೂ ಅಲ್ಲ. ಕೇಳು. ಮಲಯಕೇತುವನ್ನು ಭದ್ರಭಟ, ಪುರುಷದತ್ತ ಮೊದಲಾದ ದಳಪತಿಗಳು ಸೆರೆಹಿಡಿದು ಇಲ್ಲಿಗೆ ತರುತ್ತಿದ್ದಾರೆ.

ಸಮಿದ್ಧಾರ್ಥಕ—ಇದೇನು, ಹೀಗೆ ಮಾತಾಡುತ್ತಿದ್ದೀಯೆ ? ಭದ್ರಭಟಾದಿಗಳು ನಮ್ಮ ಮಹಾರಾಜರ ಸಂಗಡ ದ್ವೇಷಕಟ್ಟಿಕೊಂಡು ಹೋಗಿ ಮಲಯಕೇತುವಿನ ಬಳಿ ಅಧಿಕಾರದಲ್ಲಿದ್ದರೆಂದು ಜಗತ್ತೇ ಸಾರುತ್ತಾ ಇದೆ. ಅವರೇ ಮಲಯಕೇತುವನ್ನು ಸೆರೆಹಿಡಿದರು ಎಂದು ಹೇಳುತ್ತಿದ್ದೀಯಲ್ಲ. ಇದು ಹೊಂದುವ ಮಾತೆ ?

ಸಿದ್ಧಾರ್ಥಕ—ಗೆಳೆಯ, ಚಾಣಕ್ಯರ ನೀತಿ ದೈವಗತಿಯ ಹಾಗೆ. ಹಿಂದು ಮುಂದು ಹೊಂದತಕ್ಕದ್ದಲ್ಲ.

ಸಮಿದ್ಧಾರ್ಥಕ—ಸರಿಯಪ್ಪ ! ಅದು ಹೋಗಲಿ. ಮಲಯಕೇತುವಿನ ಸೈನ್ಯ ಏನು ಮಾಡುತ್ತಿತ್ತು ? ಅವನ ಸಾಮಂತರಾಜರೂ ಎದುರುಬಿದ್ದರೆ ? ಇದರ ಮೇಲೆ ಅಮಾತ್ಯರಾಕ್ಷಸ ಬೇರೆ ಅಲ್ಲಿ ಮಲಯಕೇತುವಿಗೆ ಬೆಂಬಲವಾಗಿ ಇರಲಿಲ್ಲವೆ ? ಆತನಿಗೂ ಮಂಕುಬೂದಿ ಎರಚಿದರೆ ?

ಸಿದ್ಧಾರ್ಥಕ—ಚಾಣಕ್ಯರ ನೀತಿ ಏನು ಸಾಮಾನ್ಯವೇ ? ಒಂದು ಕಲ್ಲೆಸೆದು ಮೂರು ಹಣ್ಣು ಕೆಡವಿದ ಹಾಗೆ. ಅವರು ಒಂದು ತಂತ್ರಮಾಡಿದರು. (ಅದರಲ್ಲಿ ತನ್ನ ಭಾಗವನ್ನು ಹೇಳುವುದಕ್ಕೆ ಪ್ರತಿಯಾಗಿ ಸ್ವಲ್ಪ ನಗುವನು.) ನನಗೆ ಅದರ ಫಲ—ಈ ರಾಜಮರ್ಯಾದೆ. ಮಲಯಕೇತುವಿಗೆ ಫಲ—ರಾಕ್ಷಸನನ್ನು ಕಳೆದುಕೊಂಡದ್ದು; ತನ್ನ ಕೈಕೆಳಗಿನ ಐದು ಜನ

ಸಾಮಂತರಾಜರನ್ನು ಕೋಪದಲ್ಲಿ ಕೊಲ್ಲಿಸಿಬಿಟ್ಟದ್ದು. ಈ ಅವಿವೇಕಕ್ಕೆ ಹೆದರಿ ಮಿಕ್ಕ ದೊರೆಗಳು ಸೈನ್ಯಗಳನ್ನು ಕಟ್ಟಿಕೊಂಡು ಹೇಳದೆ ಕೇಳದೆ ಮಲಯಕೇತುವಿನ ಪಾಳೆಯ ಬಿಟ್ಟು ತಮ್ಮ ತಮ್ಮ ದೇಶಗಳಿಗೆ ಓಡಿಹೋದರು. ಇನ್ನೆಲ್ಲೋ ಸ್ವಲ್ಪ ಸೈನ್ಯ ಉಳಿದಿತ್ತು; ಅದರಲ್ಲಿ ಬಲುಭಾಗ ಭದ್ರಭಟಾದಿಗಳದು. ಅಷ್ಟರೊಳಗೆ ಚಾಣಕ್ಯರು ಇಲ್ಲಿಂದ ಬೆಂಬಲವಾಗಿ ದಂಡು ಕಳುಹಿಸಿಕೊಟ್ಟರು. ಯುದ್ಧವಿಲ್ಲದೆಯೇ ಮಲಯಕೇತು ಸೆರೆ ಸಿಕ್ಕಿಹೋದನು.

ಸಮಿದ್ಧಾರ್ಥಕ—(ಬೆರಗಾಗಿ ನೋಡುತ್ತಾ) ಏನು ತಂತ್ರಗಳಪ್ಪಾ ಆ ಚಾಣಕ್ಯರು! ಅಲ್ಲವಯ್ಯ, ಇನ್ನೊಂದು ಮಾತು ಕೇಳಬೇಕು. ತುಂಬಿದ ಸಭೆಯಲ್ಲಿ ಚಾಣಕ್ಯರು ಅಧಿಕಾರವನ್ನು ಬಿಸಾಟುಬಿಟ್ಟರಲ್ಲ. ಈಗ ಮತ್ತೆ ಹೇಗೆ ಅದೇ ಮಂತ್ರಿಪದವಿಯನ್ನು ಯಾರಿಗೂ ಅರಿವಿಲ್ಲದಂತೆ ವಹಿಸಿದರು?

ಸಿದ್ಧಾರ್ಥಕ—ನೀನು ಶುದ್ಧ ಮೂಢ. ಇಲ್ಲದಿದ್ದರೆ, ಅಮಾತ್ಯರಾಕ್ಷಸನಿಗೇ ಅರ್ಥವಾಗದಿದ್ದ ಈ ಚಾಣಕ್ಯರ ನಡೆವಳಿಕೆಯನ್ನು ನೀನು ಅರ್ಥ ಮಾಡಿಕೊಳ್ಳಬೇಕೆಂದು ಕೇಳುತ್ತಿದ್ದೆಯಾ?

ಸಮಿದ್ಧಾರ್ಥಕ—ಈಗ ಅಮಾತ್ಯರಾಕ್ಷಸ ಎಲ್ಲಿ?

ಸಿದ್ಧಾರ್ಥಕ—ಆತನಿಗೆ ತುಂಬ ಕಷ್ಟ ಬಂತು. ನಾನೂ ಕೆಲವು ದಿನ ಆತನ ಸೇವೆಮಾಡಿದೆ: ಒಳ್ಳೆಯ ದಣಿ. ಕೈಕೆಳಗಿನವರ ಮೇಲೆ ಆತನಿಗೆ ಬಲುಪ್ರೀತಿ, ಬಲು ನಂಬಿಕೆ. ಈ ನಂಬಿಕೆಯೇ ಅವನನ್ನು ತಿಂದಿತು. ಮಲಯಕೇತು ಅವನ ಮುಖಮುರಿದಾಗ ನನಗೇ ಸಂಕಟವಾಯಿತು. ಏನು ಮಾಡುವುದು? ರಾಜಸೇವೆ ನರಕಕ್ಕೆ ದೊಡ್ಡ ದಾರಿ. . . .

ಸಮಿದ್ಧಾರ್ಥಕ—ಈ ಪಶ್ಚಾತ್ತಾಪ ಹಾಗಿರಲಿ. ನನ್ನ ಪ್ರಶ್ನೆಗೆ ಉತ್ತರ ಕೊಡು.

ಸಿದ್ಧಾರ್ಥಕ—(ನಕ್ಕು) ಮನಸ್ಸಿಗೆ ಏನೋ ಮರುಕ ಹುಟ್ಟಿತು. ಅದಕ್ಕೆ ಹೀಗೆ ಆಡಿದೆ. . . . ಅಮಾತ್ಯರಾಕ್ಷಸ ಈಗ ಕುಸುಮಪುರದ ಸಮೀಪಕ್ಕೇ ಬಂದಿದ್ದಾನಂತೆ. ಆತನು ಮಲಯಕೇತುವಿನ ಪಾಳೆಯ ಬಿಟ್ಟು ಹೊರಟಾಗಿನಿಂದಲೂ ಒಬ್ಬ ಚಾರ ಅವನನ್ನು ಹಿಂಬಾಲಿಸಿಕೊಂಡೇ

ಬರುತ್ತಿದ್ದನು. ಅವನು ಬಂದು ಚಾಣಕ್ಯರಿಗೆ ಈ ಮಾತನ್ನು ನನ್ನೆದುರಿಗೇ ಹೇಳಿದನು.

ಸಮಿದ್ಧಾರ್ಥಕ—ನಂದರ ರಾಜ್ಯವನ್ನು ಮತ್ತೆ ಸಾಧಿಸಬೇಕೆಂದು ಹಾಗೆ ಹಠ ತೊಟ್ಟು ಊರು ಬಿಟ್ಟು ಹೋದ ಅಮಾತ್ಯ ಹೀಗೆ ಪರದೇಶಿಯಾಗಿ ಪ್ರಯತ್ನ ಸಿದ್ಧಿಸುವುದಕ್ಕೆ ಮುಂಚೆಯೇ ಕುಸುಮಪುರಕ್ಕೆ ಬಂದನಲ್ಲಾ!

ಸಿದ್ಧಾರ್ಥಕ—ಬಹುಶಃ ಚಂದನದಾಸಸೆಟ್ಟಿಯ ಮೇಲಿನ ಸ್ನೇಹದಿಂದ ಬಂದಿದ್ದಾನು.

ಸಮಿದ್ಧಾರ್ಥಕ—ಹಾಗಾದರೆ ಆತನಿಗೆ ಬಿಡುಗಡೆಯಾದೀತು.

ಸಿದ್ಧಾರ್ಥಕ—ಆ ದುರ್ದೈವಿಗೆ ಬಿಡುಗಡೆಯೆಲ್ಲಿ ಬಂತು! (ತಟಕ್ಕನೆ ಜ್ಞಾಪಿಸಿಕೊಂಡು) ಚಾಣಕ್ಯರು ಅಪ್ಪಣೆ ಮಾಡಿದ್ದಾರೆ: ಈಗ ನೀನೂ ನಾನೂ ಅವನನ್ನು ವಧ್ಯಸ್ಥಾನಕ್ಕೆ ಕರೆದುಕೊಂಡು ಹೋಗಿ ಶೂಲಕ್ಕೇರಿಸಬೇಕಂತೆ. ನನ್ನ ಸಂತೋಷದಲ್ಲಿ ಇದನ್ನು ಮರೆತೇ ಬಿಟ್ಟಿದ್ದೆನಲ್ಲಾ!

ಸಮಿದ್ಧಾರ್ಥಕ—(ಕೋಪದಿಂದ) ಏನು ಇದು? ಚಾಣಕ್ಯರ ಹತ್ತಿರ ಕೊಲೆಗಾರರೂ ಬೇರೆ ಯಾರೂ ಇಲ್ಲವೊ? ಈ ಘೋರಕೃತ್ಯಕ್ಕೂ ನಮ್ಮನ್ನೇ ನೇಮಿಸಬೇಕೆ? ನನ್ನಿಂದ ಆಗುವುದಿಲ್ಲ.

ಸಿದ್ಧಾರ್ಥಕ—ಬಾ, ಬಾ, ಗೆಳೆಯ. ಹಾಗೆನ್ನಬಹುದೆ? ಬದುಕುವ ಆಸೆ ಇದ್ದವನು ಯಾರು ತಾನೆ ಲೋಕದಲ್ಲಿ ಚಾಣಕ್ಯರ ಆಜ್ಞೆಗೆ ಎದುರಾಗಿ ಹೋಗಬಹುದು? ಬಾ. ಚಂಡಾಲರ ವೇಷವನ್ನು ಬೇರೆ ಹಾಕಿಕೊಳ್ಳಬೇಕು. . . . ಇದರಲ್ಲಿ ಇನ್ನೊಂದು ರಹಸ್ಯವಿದೆ. ಹೇಳುತ್ತೇನೆ, ಬಾ. . . .

ತೆರೆ.

## ದೃಶ್ಯ: ೨

(ಕುಸುಮಪುರದ ಹೊರವಳಯದಲ್ಲಿ ಒಂದು ಜೀರ್ಣೋದ್ಯಾನ. ಮುಖಕ್ಕೆ ಮುಸುಕು ಹಾಕಿಕೊಂಡು ಸಶಸ್ತ್ರನಾಗಿ ರಾಕ್ಷಸನು ಪ್ರವೇಶಿಸುವನು.)

ರಾಕ್ಷಸ—(ಸುತ್ತಲೂ ನೋಡುತ್ತಾ) ಪ್ರಭುಗಳು ಬದುಕಿದ್ದಾಗ ಈ ಉದ್ಯಾನ ಎಷ್ಟು ಕಳಕಳಿಸುತ್ತಿತ್ತು! ಇಲ್ಲಿ ನಡೆಯುತ್ತಿದ್ದ ಆ ಕುದುರೆ ಸವಾರಿ,

ಆ ಜಲಕ್ರೀಡೆ, ಆ ವಿನೋದ ಗೋಷ್ಠಿ—ಎಲ್ಲವೂ ಇನ್ನೆಲ್ಲಿ! ಅವರ ವಿಯೋಗದಿಂದ ದುಃಖಪಡುತ್ತಿರುವಂತೆ ಈ ಉದ್ಯಾನವೂ ಪಾಳು ಬಿದ್ದಿದೆಯಲ್ಲಾ! . . . ಈಗ ಎಲ್ಲಿ ಹೋಗಲಿ? ಮತ್ತೊಬ್ಬರಿಗೆ ಹೇಗೆ ಮುಖ ತೋರಿಸಲಿ? ಈ ಜೀರ್ಣೋದ್ಯಾನವೇ ಗತಿ. . . . ಆಹಾ! ಎಲ್ಲಿಗೆ ಇಳಿಯಿತು! ಆಗ, ಸಾವಿರಾರು ಜನ ಅರಸುಗಳ ಮುಂದುಗಡೆ ಅಶ್ವಾರೂಢನಾಗಿ ಬೀದಿಯಿಂದ ಹೊರಟು ಈ ಉದ್ಯಾನಕ್ಕೆ ನಾನು ಬರುತ್ತಿದ್ದರೆ ಪುರಜನರೆಲ್ಲಾ ಬಾಲಚಂದ್ರನನ್ನು ತೋರಿಸುವಂತೆ ನನ್ನ ಕಡೆಗೇ ಬೆರಳು ನೀಡಿ ತೋರಿಸುತ್ತಿದ್ದರು. ಈಗ, ಅದೇ ನಾನು, ಅದೇ ಪುರ, ಅದೇ ಉದ್ಯಾನ! ಹಿಡಿದ ಪ್ರಯತ್ನ ಭಗ್ನವಾದದ್ದರಿಂದ ಕಳ್ಳನಂತೆ ಬೆದರುತ್ತಾ ಬೇಗ ಬೇಗ ಈ ಜೀರ್ಣೋದ್ಯಾನದಲ್ಲಿ ಸೇರಿಕೊಳ್ಳಬೇಕಾಯಿತೆ! . . . (ಹಾಗೆಯೇ ಯೋಚಿಸಿ) ನನ್ನ ಸ್ಥಿತಿಗೆ ಏಕೆ ಹಲುಬಲಿ? ಯಾರ ಅನುಗ್ರಹದಿಂದ ಇದೆಲ್ಲ ನಡೆಯುತ್ತಿತ್ತೋ ಅವರೇ ಮೊದಲು ಇಲ್ಲ! . . . ಆದರೆ ಎಲ್ಲವೂ ಹೇಗೆ ಬದಲಾಗಿ ಹೋಯಿತು! ಸಂಪತ್ತು ಅನ್ಯರ ಕೈಸೇರಿ ಅಲ್ಲೇ ನೆಲಸಿತು. ಆ ಸಂಪತ್ತು ಹೋದ ಮಾರ್ಗವನ್ನೇ ಹಿಂದೆ ಅಷ್ಟು ಅನುರಕ್ತರಾಗಿದ್ದ ಜನಗಳೂ ಅನುಸರಿಸಿದರು. ಉಳಿದಿದ್ದ ಆಪ್ತರು ಕೆಲವರೂ ಆಶಾಭಂಗವನ್ನು ಹೊಂದಿ ಕೊನೆಗೆ ಉದ್ಯಮವನ್ನು ಕೈಬಿಟ್ಟರು. . . . ನನ್ನ ಸ್ಥಿರಸಾಹಸವೆಲ್ಲವನ್ನೂ ದೈವವು ಶತ್ರುವಿನಂತೆ ಕೆಡಿಸುತ್ತಾ ಬಂದಿತು: ಪ್ರಭುಗಳು ಆ ರೀತಿ ಕಪಟಮೃತ್ಯುವಿಗೆ ಸಿಕ್ಕಿ ಮಡಿದರು. ಪರ್ವತೇಶ್ವರನನ್ನಾದರೂ ಒಲಿಸಿಕೊಂಡು ಮುಂದಿನ ಕಾರ್ಯವನ್ನು ನಡಸಬೇಕೆನ್ನುವಷ್ಟರಲ್ಲಿಯೇ ಅವನೂ ಉರುಳಿದನು. ಅವನ ಮಗನನ್ನು ಆಶ್ರಯಿಸಿದರೆ, ಅಲ್ಲಿಯೂ ನನ್ನ ಕೈ ಸಾಗದೆ ಹೀಗೆ ಮಾನಭಂಗವಾಯಿತು. . . . ಹಾ! ದೈವವೆ, ನೀನೇ ನಂದಕುಲದ ಶತ್ರು, ಈ ಬಡ ಚಾಣಕ್ಯನಲ್ಲ!

(ನೇಪಥ್ಯದಲ್ಲಿ ದೂರದ ದುಂದುಭಿಘೋಷವಾಗುವುದು.)

ರಾಕ್ಷಸ—(ಆಲಿಸಿ) ಆಹಾ! ಇದು ಮಲಯಕೇತುವನ್ನು ಸೆರೆಹಿಡಿದು ಕರೆತರುವ ಉತ್ಸವ ಧ್ವನಿಯೇ ಇರಬೇಕು! ಮೌರ್ಯಹತಕನಿಗೆ ಅಭ್ಯುದಯದ

ಮೇಲೆ ಅಭ್ಯುದಯ! (ಕಂಬನಿ ದುಂಬಿ) ಶತ್ರುಪನ ಸಿರಿಯನ್ನು ವಿಧಿ ನನಗೆ ಕೇಳಿಸಿತು; ಎಳೆತಂದು ತೋರಿಸಿತು; ಇನ್ನು ಅನುಭವ ಮಾಡಿಸುವ ಯತ್ನಕ್ಕೆ ಕೈಹಾಕಿದೆಯೋ ಏನೋ! ಆಗಲಿ, ಶತ್ರುಗಳ ಕೈಗೆ ಸಿಕ್ಕಿ ಹತನಾದರೂ ಚಿಂತೆಯಿಲ್ಲ; ಸರ್ವಥಾ ನಾನು ಚಂದ್ರ ಗುಪ್ತನ ಸಂಗಡ ಸಂಧಿ ಮಾಡಿಕೊಳ್ಳತಕ್ಕವನಲ್ಲ. ತನ್ನ ಪ್ರಭುಗಳ ವಂಶವೇ ನಿರ್ಮೂಲವಾಗಿದ್ದರೂ ಅವರ ಸೇವೆಯನ್ನು ಅನನ್ಯ ಭಾವದಿಂದ ಮಾಡುತ್ತಿರುವ ಈ ರಾಕ್ಷಸನು ಆ ಕುಲಘಾತುಕ ನೊಂದಿಗೆ ಹೇಗೆ ತಾನೆ ಸಂಧಿಯನ್ನು ಮಾಡಿಕೊಂಡಾನು! ಅವಿವೇಕಿ ಮಲಯಕೇತುವಿಗೆ ಇಷ್ಟು ತಿಳಿಯದೆ ಹೋಯಿತೆ! ದೈವವು ಅವನ ಪ್ರಜ್ಞೆಯನ್ನೂ ಬಡಿದುಹಾಕಿತೆ! . . . ಆಯಿತು. ಕೈವಿಾರಿದ ಕನಸಿ ಗಾಗಿ ಹಲುಬುತ್ತಾ ಹೀಗೆ ಕಾಲಕಳೆದರೆ ಮಿತ್ರವಿನಾಶದ ವರ್ತಮಾನ ವನ್ನೂ ಕೇಳಬೇಕಾದೀತು. . . . ಚಂದನದಾಸನನ್ನು ರಕ್ಷಿಸುವು ದೊಂದೇ ಈಗ ನನ್ನ ಕರ್ತವ್ಯ. ಅವನ ವಿಷಯ ನನಗೆ ಗೊತ್ತಾಗು ವುದು ಹೇಗೆ? ಇಲ್ಲಿಗೆ ಬರುವ ಆಗಂತುಕರನ್ನಾದರೂ ಕೇಳಬೇಕು.

(ಒಂದು ಶಿಲೆಯ ಮೇಲೆ ಕುಳಿತುಕೊಳ್ಳುವನು.)

(ರಂಗಸ್ಥಳದಲ್ಲಿ ಒಂದು ಮರದ ಹಿಂದಿನಿಂದ ಕೂಗು ಕೇಳಿಸುವುದು:)

"ಎಲೈ ದೇವತೆಗಳಿರಾ! ನಿಮಗೆ ನನ್ನ ಕೊನೆಯ ಪ್ರಣಾಮಗಳು. ಒಡೆಯನ ಸಾವನ್ನು ಕೇಳಲಾರದೆ ಹೀಗೆ ಪ್ರಾಣ ಕಳೆದುಕೊಳ್ಳು ತ್ತಿದ್ದೇನೆ. ನನಗೆ ದೋಷ ಸಂಭವಿಸದಂತೆ ಕರುಣಿಸಿರಿ!"

ರಾಕ್ಷಸ—(ಕೂಗನ್ನು ಕೇಳಿ) ಏನಿದು ಕೂಗು! (ಥಟ್ಟನೆದ್ದು ಮರದ ಬಳಿಗೆ ಹೋಗಿ ನೋಡಿ) ಅಯ್ಯೋ, ಏನು ಇದು? ಎಂಥ ಘೋರಕೃತ್ಯಕ್ಕೆ ಕೈಹಾಕಿದ್ದೀಯೆ! ಬಾ, ಬಾ, ಈಚೆಗೆ! (ಉರುಲನ್ನು ಬಿಡಿಸಿ ವ್ಯಕ್ತಿ ಯೊಬ್ಬನನ್ನು ಈಚೆಗೆ ಕರೆತರುವನು.) ಏನು ಕೆಲಸ ಇದು!

ಪುರುಷ—(ಕೈಬಿಡಿಸಿಕೊಳ್ಳುತ್ತಾ, ಸಾಗದೆ) ಅಪ್ಪಾ, ಸ್ವಾಮಿವಿಯೋಗದಿಂದ ದುಃಖಗೊಂಡು ನನ್ನಂಥ ನಿರ್ಭಾಗ್ಯನು ಮಾಡುವ ಕೆಲಸ ಇದು. ನನಗೇಕೆ ಅಡ್ಡಿ ಮಾಡುತ್ತೀಯೆ? ಬಿಡು.

ರಾಕ್ಷಸ—(ತನ್ನಲ್ಲಿ) ಸ್ವಾಮಿವಿಯೋಗದ ದುಃಖ! ಹಾಗಾದರೆ ನನ್ನಂತೆಯೇ ಇವನೂ! (ಪ್ರಕಾಶವಾಗಿ) ಅಯ್ಯಾ ದುಃಖಿ, ನಿನ್ನ ವ್ಯಸನ ಎಂಥದು? ಅತಿರಹಸ್ಯವಲ್ಲದಿದ್ದರೆ ನಮಗೂ ತಿಳಿಸು, ಕೇಳೋಣ.

ಪುರುಷ—ರಹಸ್ಯವೂ ಅಲ್ಲ, ಏನೂ ಅಲ್ಲ. ಆದರೆ ಪ್ರಿಯಸ್ವಾಮಿಯ ವಿನಾಶದಿಂದ ನನ್ನ ಹೃದಯ ಬೆಂದುಹೋಗಿದೆ; ಮರಣಕ್ಕೆ ಒಂದು ಕ್ಷಣ ಕಾಲವೂ ತಡಮಾಡಲಾರೆ.

ರಾಕ್ಷಸ—(ನಿಟ್ಟುಸಿರು ಬಿಟ್ಟು, ತನ್ನಲ್ಲಿ) ನಾನು ಉದಾಸೀನವಾಗಿರುವುದನ್ನು ಈತನು ಜರೆಯುವಂತಿದೆ! (ಪ್ರಕಾಶವಾಗಿ) ಇಷ್ಟೇತಕ್ಕೆ ಆತುರ? ವಿಷಯವೇನು, ಹೇಳು.

ಪುರುಷ—ಏನು ನಿರ್ಬಂಧವಪ್ಪಾ ನಿನ್ನದು! ಇನ್ನೇನು ಗತಿ! ಹೇಳಿಬಿಡುತ್ತೇನೆ. ಈ ಪಟ್ಟಣದಲ್ಲಿ ವಿಷ್ಣುದಾಸನೆಂಬ ರತ್ನಪಡಿ ವರ್ತಕನಿದ್ದಾನೆ. . . .

ರಾಕ್ಷಸ—(ತನ್ನಲ್ಲಿ) ವಿಷ್ಣುದಾಸ: ಚಂದನದಾಸನ ಮಿತ್ರ!

ಪುರುಷ—ನಾನು ಆತನ ಪಾದಸೇವಕ.

ರಾಕ್ಷಸ—(ತನ್ನಲ್ಲಿ) ಪಾದಸೇವಕ! ಹಾಗಾದರೆ ಇವನಿಗೆ ಚಂದನದಾಸನ ವೃತ್ತಾಂತ ಗೊತ್ತಿರಲೇ ಬೇಕು. (ಪ್ರಕಾಶವಾಗಿ) ಅಯ್ಯಾ, ಆತನಿಗೆ ಏನಾಯಿತು?

ಪುರುಷ—ಆತನು ಈ ದಿನ ತನ್ನ ಒಡವೆ ವಸ್ತುಗಳನ್ನೆಲ್ಲಾ ದಾನಕೊಟ್ಟು ಅಗ್ನಿಪ್ರವೇಶ ಮಾಡುವುದಕ್ಕೆಂದು ಪಟ್ಟಣವನ್ನು ಬಿಟ್ಟು ಹೊರಟು ಹೋದನು. ಅಂಥ ದಣಿಯನ್ನು ಕಳೆದುಕೊಂಡ ವರ್ತಮಾನ ಕಿವಿಗೆ ಬೀಳುವ ಮೊದಲೇ ನಾನೂ ನೇಣುಹಾಕಿಕೊಂಡು ಪ್ರಾಣ ಬಿಡಬೇಕೆಂದು ಈ ಜೀರ್ಣೋದ್ಯಾನಕ್ಕೆ ಬಂದೆನು.

ರಾಕ್ಷಸ—ನಿನ್ನ ಸ್ವಾಮಿ ಅಗ್ನಿಪ್ರವೇಶ ಮಾಡುವುದಕ್ಕೆ ಏನು ಕಾರಣ? ಔಷಧಿಗಳಿಗೆ ಕೆಂದದ ಮಹಾವ್ಯಾಧಿಯನ್ನು ಅನುಭವಿಸಲಾರದೆ ಬೇಸತ್ತನೋ?

ಪುರುಷ—ಇಲ್ಲ, ಇಲ್ಲ.

ರಾಕ್ಷಸ—ವಿಷಾಗ್ನಿಗೆ ಸಮನಾದ ರಾಜಕೋಪಕ್ಕೆ ಗುರಿಯಾದನೋ ?

ಪುರುಷ— ಛೇ, ಛೇ ! ಚಂದ್ರಗುಪ್ತನ ರಾಜ್ಯದಲ್ಲಿ ಅಂಥ ಘೋರಕೃತ್ಯಕ್ಕೆ ಅವಕಾಶವಿಲ್ಲ.

ರಾಕ್ಷಸ—ಇಲ್ಲವಾದರೆ, ತನಗೆ ದೊರೆಯದ ಹೆಣ್ಣನ್ನು ಬಯಸಿದನೋ ?

ಪುರುಷ—(ಕಿವಿಗಳನ್ನು ಮುಚ್ಚಿಕೊಂಡು) ಉಂಟೇ ? ಅಂಥಾ ಅವಿನಯ ಆತನ ಹತ್ತಿರಕ್ಕೇ ಸುಳಿಯುವುದಿಲ್ಲ.

ರಾಕ್ಷಸ—ಹಾಗಾದರೆ, ನಿನ್ನಂತೆಯೇ ಅವನೂ ಪ್ರಿಯವಿನಾಶಕ್ಕೆ ಅಂಜಿದನೋ?

ಪುರುಷ—ಹೌದು, ಪ್ರಿಯಮಿತ್ರನ ವಿನಾಶಕ್ಕೆ ಅಂಜಿದನು.

ರಾಕ್ಷಸ—(ಆಕುಲನಾಗಿ, ತನ್ನಲ್ಲಿ) ಚಂದನದಾಸನ ಪ್ರಿಯಮಿತ್ರನಂತೆ, ಮಿತ್ರ ವಿನಾಶವೇ ಅಗ್ನಿಪ್ರವೇಶಕ್ಕೆ ಕಾರಣವಂತೆ. . . . ಹೃದಯ ತಲ್ಲಣಿಸುತ್ತಿದೆ. (ಪ್ರಕಾಶವಾಗಿ) ಅಯ್ಯಾ, ಯಾರು ಆ ಮಿತ್ರ ? ಮಿತ್ರ ವಾತ್ಸಲ್ಯದಿಂದ ಪ್ರಾಣ ಬಿಡುವ ಈತನ ಚರಿತ್ರೆಯೇನು ? ನನಗೆ ಕೇಳಬೇಕು ಎನ್ನಿಸಿದೆ. ಬಿಡಿಸಿ ಹೇಳು.

ಪುರುಷ—(ತ್ವರೆಯನ್ನು ಸೂಚಿಸಿ) ಇನ್ನು ನಾನು ಮರಣಕ್ಕೆ ವಿಘ್ನಮಾಡಿಕೊಳ್ಳಲಾರೆ ! ಕೈಬಿಡು.

ರಾಕ್ಷಸ—ಹಾಗಲ್ಲವಪ್ಪ, ಸ್ತೋತ್ರಾರ್ಹವಾದ ಈ ಕಥೆಯನ್ನು ಹೇಳುವುದಿಲ್ಲ ಎನ್ನಬಾರದು.

ಪುರುಷ—ಇನ್ನೇನು ಗತಿ ! . . . ಕೇಳು ಹಾಗಾದರೆ. ಈ ನಗರದಲ್ಲಿ ಚಂದನದಾಸನೆಂಬ ರತ್ನಪಡಿ ವರ್ತಕನಿದ್ದಾನೆ.

ರಾಕ್ಷಸ—(ವಿಷಾದದಿಂದ, ತನ್ನಲ್ಲಿ) ಹಾ ! ದೈವವು ನನ್ನ ದುಃಖದ ಹೆಬ್ಬಾಗಿಲನ್ನೇ ತೆರೆಯಿತು. . . . ಏನು ಕಠೋರವಾರ್ತೆಯನ್ನು ಕೇಳಬೇಕಾಗಿದೆಯೋ ! (ಪ್ರಕಾಶವಾಗಿ) ಆತನು ತುಂಬ ಮಿತ್ರವತ್ಸಲನೆಂದು ಹೇಳುತ್ತಾರೆ. ಅವನ ವಿಚಾರವೇನು ?

ಪುರುಷ—ಅವನೇ ನನ್ನ ಸ್ವಾಮಿಯ ಪ್ರಿಯಮಿತ್ರ.

ರಾಕ್ಷಸ—(ತನ್ನಲ್ಲಿ) ಶೋಕದ ಸಿಡಿಲು ಹೃದಯಕ್ಕೇ ಬಡಿಯಿತು.

ಪುರುಷ—ವಿಷ್ಣುದಾಸನು ಮಿತ್ರಸ್ನೇಹದಿಂದ ಚಂದ್ರಗುಪ್ತನ ಬಳಿಗೆ ಹೋಗಿ,

"ಮಹಾಸ್ವಾಮಿ, ನನ್ನ ಸಕಲೈಶ್ವರ್ಯವನ್ನೂ ಸ್ವೀಕರಿಸಿ ಚಂದನದಾಸನನ್ನು ಬಿಡಿಸಿಕೊಡಬೇಕು" ಎಂದು ಎಷ್ಟೋ ಬಗೆಯಾಗಿ ವಿಜ್ಞಾಪಿಸಿಕೊಂಡನು.

ರಾಕ್ಷಸ—ಸಾಧು ವಿಷ್ಣುದಾಸ! ನೀನು ವರ್ತಕತನದಿಂದ ಗಳಿಸಿದ ಹಣಕ್ಕೆ ಈಗ ಸಾಫಲ್ಯವುಂಟಾಯಿತು. . . . ಮೌರ್ಯನು ಆಗ ಏನು ಮಾಡಿದನು?

ಪುರುಷ—ಅವನು ವಿಷ್ಣುದಾಸನಿಗೆ ಹೇಳಿದನು: "ನಾನು ಹಣಕ್ಕಾಗಿ ಚಂದನದಾಸನನ್ನು ಸೆರೆಗೆ ಹಾಕಿಲ್ಲ. ಇವನು ರಾಕ್ಷಸನ ಮನೆಯ ಜನರನ್ನು ಮರೆಮಾಜಿದ್ದಾನೆಂದು ಹಲವು ಕಡೆಗಳಿಂದ ಗೊತ್ತಾಯಿತು. ಎಷ್ಟು ವಿಧವಾಗಿ ಕೇಳಿದರೂ ಕೂಡ ಅವರನ್ನು ಒಪ್ಪಿಸಲಿಲ್ಲ. ಅವರನ್ನು ತಂದೊಪ್ಪಿಸಿದರೇ ಇವನಿಗೆ ಬಿಡುಗಡೆ. ಇಲ್ಲವಾದರೆ ಪ್ರಾಣಾಂತ ಶಿಕ್ಷೆ."—ಹೀಗೆ ಹೇಳಿ ಈ ದಿನ ಚಂದ್ರಗುಪ್ತನು ಚಂದನದಾಸನನ್ನು ವಧ್ಯಸ್ಥಾನಕ್ಕೆ ಕಳುಹಿಸಿದನು. ಚಂದನದಾಸನ ವಿಷಯದಲ್ಲಿ ಕೇಳಬಾರದ್ದನ್ನು ಕೇಳುವ ಮೊದಲೇ ನಾನು ಬೆಂಕಿಗೆ ಬೀಳುತ್ತೇನೆಂದು ವಿಷ್ಣುದಾಸನು ಊರುಬಿಟ್ಟು ಹೋದನು. ನನ್ನ ಸ್ವಾಮಿಯ ವಿಷಯದಲ್ಲಿ ಕೇಳಬಾರದ್ದನ್ನು ಕೇಳುವ ಮೊದಲೇ ನೇಣು ಹಾಕಿಕೊಳ್ಳಬೇಕೆಂದು ನಾನೂ ಈ ಜೀರ್ಣೋದ್ಯಾನಕ್ಕೆ ಬಂದೆನು.

ರಾಕ್ಷಸ—ಅಯ್ಯಾ, ಚಂದನದಾಸನನ್ನು ಇನ್ನೂ ಕೊಲ್ಲಿಸಿಲ್ಲವಷ್ಟೆ?

ಪುರುಷ—ಈ ದಿವಸವೇ ಶೂಲಕ್ಕೇರಿಸುತ್ತಾರಂತೆ. ಅಮಾತ್ಯರಾಕ್ಷಸನ ಮನೆಯ ಜನವನ್ನು ಒಪ್ಪಿಸಿಕೊಡೆಂದು ಈ ದಿನ ಮತ್ತೆ ಅವನನ್ನು ಕೇಳುತ್ತಾರೆ. ಮಿತ್ರವಾತ್ಸಲ್ಯದಿಂದ ಅವನು ಒಪ್ಪಿಸಿಕೊಡುವುದಿಲ್ಲ. . . . ನಾನು ಇನ್ನು ಕಾಲಹರಣ ಮಾಡಲಾರೆ.

ರಾಕ್ಷಸ—(ತನ್ನಲ್ಲಿ) ಸಾಧು, ಸಾಧು, ಗೆಳೆಯ ಚಂದನದಾಸ! ನಾನು ಎದುರಿಗಿಲ್ಲದಾಗಲೂ ಹೀಗೆ ಶರಣಾಗತ ರಕ್ಷಣೆಮಾಡಿ ನೀನು ಶಿಬಿ ಚಕ್ರವರ್ತಿಗೂ ಮಿಗಿಲಾದೆ. (ಪ್ರಕಾಶವಾಗಿ) ಅಯ್ಯಾ, ನೇಣಿನ ಚಿಂತೆಯನ್ನು ಬಿಡು. ಹೋಗು, ಹೋಗು ಈಗ. ವಿಷ್ಣುದಾಸನ

ಅಗ್ನಿಪ್ರವೇಶವನ್ನು ನಿಲ್ಲಿಸು. ನಾನೂ ಚಂದನದಾಸನನ್ನು ಮರಣದಿಂದ ಬಿಡಿಸುತ್ತೇನೆ.

ಪುರುಷ—ಆ! . . . ಯಾವ ಉಪಾಯದಿಂದ ಚಂದನದಾಸನನ್ನು ಬಿಡಿಸುತ್ತೀಯೆ?

ರಾಕ್ಷಸ—(ಖಡ್ಗವನ್ನು ಸೆಳೆದು ಝಳಪಿಸುತ್ತ) ಇಗೋ, ಕಾರ್ಯಸಚಿವನಾದ ಈ ಖಡ್ಗದಿಂದ!

ಪುರುಷ—(ಏನನ್ನೋ ಅರಿತುಕೊಂಡವನಂತೆ) ಸ್ವಾಮಿ, ಚಂದನದಾಸಸೆಟ್ಟಿಯನ್ನು ಬದುಕಿಸುತ್ತೇನೆ ಎಂದು ತಾವು ಹೇಳಿದ್ದೇ ಸಾಕು; ಆದರೂ ತಮ್ಮ ಈ ದುರವಸ್ಥೆಯನ್ನು ನೋಡಿದರೆ, ಹೀಗೇ ಸರಿ ಎಂದು ನಾನು ನಿರ್ಣಯಿಸಲಾರೆ. ಸ್ವಾಮಿಯವರು ಅಮಾತ್ಯರಾಕ್ಷಸರೇ ಅಲ್ಲವೆ? ತಮ್ಮ ಪಾದದ ದರ್ಶನ ಲಭಿಸಿದ್ದು ನನ್ನ ಪುಣ್ಯ. (ಕಾಲಿಗೆ ಬೀಳುವನು.)

ರಾಕ್ಷಸ—ಏಳಪ್ಪ, ಏಳು. (ಎಬ್ಬಿಸಿ) ಇನ್ನು ಕಾಲ ಕಳೆಯಬೇಡ. ಚಂದನದಾಸನಿಗೆ ಬಿಡುಗಡೆಯಾಗುತ್ತದೆಂದು ನಿನ್ನ ಸ್ವಾಮಿಗೆ ತಿಳಿಸು ಹೋಗು. ಈ ಖಡ್ಗದ ಸಹಾಯದಿಂದ ಈ ಸಾಹಸಕ್ಕೆ ಕೈಹಾಕುತ್ತೇನೆ. (ಖಡ್ಗವನ್ನು ಝಳಪಿಸುತ್ತಾ ಹೆಜ್ಜೆಹಾಕುವನು.)

ಪುರುಷ—ನನ್ನ ಸಂಶಯವನ್ನು ಕಳೆದು ಅನುಗ್ರಹಿಸಬೇಕು.

ರಾಕ್ಷಸ—ರಾಕ್ಷಸನೇ ನಾನು. ಪ್ರಭುಗಳನ್ನು ನೀಗಿಕೊಂಡವನು, ಮಿತ್ರನನ್ನು ವಿಪತ್ತಿಗೆ ಸಿಕ್ಕಿಸಿದವನು: ಯಥಾರ್ಥವಾಗಿಯೂ ರಾಕ್ಷಸನೇ ನಾನು.

ಪುರುಷ—(ಮತ್ತೆ ಕಾಲಿಗೆ ಬಿದ್ದು) ಅಮಾತ್ಯರು ಪ್ರಸನ್ನರಾಗಬೇಕು. ತಾವು ಈ ಸಮಯಕ್ಕೆ ಒದಗಿದ್ದು ನಮ್ಮ ಭಾಗ್ಯ. . . . ಆದರೆ ಒಂದು ಅರಿಕೆ. ಹಿಂದೆ ಆರ್ಯ ಶಕಟದಾಸನನ್ನು ಶೂಲಕ್ಕೇರಿಸುವಾಗ ಒಂದು ಸಂಗತಿ ನಡೆಯಿತು. ಯಾರೋ ಕತ್ತಿಯನ್ನು ಝಳಪಿಸುತ್ತಾ ಬಂದು ಆತನನ್ನು ಬಿಡಿಸಿಕೊಂಡು ಹೋದರು. ಆಗ "ಯಾರ ಪ್ರಮಾದ ಇದು?" ಎಂದು ಚಂದ್ರಗುಪ್ತ ಹತಕನು ತುಂಬ ರೇಗಿ, ಶಕಟದಾಸನ ಮೇಲಿನ ರೋಷವನ್ನೆಲ್ಲಾ ಆ ಕೊಲೆಗಾರರನ್ನು ಕೊಲ್ಲಿಸಿ ತೀರಿಸಿಕೊಂಡನು.

ಅಲ್ಲಿಂದೀಚೆಗೆ ಕೊಲೆಗಾರರು ತಮ್ಮ ಪ್ರಾಣವನ್ನು ಉಳಿಸಿಕೊಳ್ಳು ವುದಕ್ಕಾಗಿ ವಿಶೇಷ ಎಚ್ಚರವಾಗಿರುತ್ತಾರೆ. ವಧ್ಯಸ್ಥಾನದ ಬಳಿ ಎತ್ತಕಡೆಯಾದರೂ ಶಸ್ತ್ರಹಿಡಿದು ಪುರುಷನು ಬರುವುದನ್ನು ಕಂಡ ಕೂಡಲೇ ಮೊದಲು ಬಂದಿಯನ್ನು ಸಂಹರಿಸಿಬಿಡುತ್ತಾರೆ. ಅಮಾತ್ಯರು ಶಸ್ತ್ರಹಿಡಿದು ಅಲ್ಲಿಗೆ ಹೋದರೆ ಚಂದನದಾಸಸೆಟ್ಟಿಯ ವಧೆಯನ್ನು ಇನ್ನೂ ಮುಂಚೆಯೇ ಮಾಡಿಸಿದಂತಾಗುತ್ತದೆ.

ರಾಕ್ಷಸ—(ತನ್ನಲ್ಲಿ) ಇದೇನು, ಈ ಚಾಣಕ್ಯನ ನೀತಿಯ ನೆಲೆಯೇ ಬುದ್ಧಿಗೆ ಹತ್ತುವುದಿಲ್ಲವಲ್ಲ! . . . ಅವನು ಶಕಟದಾಸನನ್ನು ಉದ್ದೇಶಪಟ್ಟು ನನ್ನ ಬಳಿಗೆ ಕಳುಹಿಸಿದ್ದರೆ ಕೊಲೆಗಾರರನ್ನೇಕೆ ಹೀಗೆ ಕೊಲ್ಲಿಸ ಬೇಕಾಗಿತ್ತು? ಶಕಟದಾಸನು ಅವರ ಸಂಚಿಗೆ ಒಳಪಡದಿದ್ದರೆ ನನಗೇಕೆ ಆ ಕಷ್ಟ ಒದಗುತ್ತಿತ್ತು? . . . . ಏನೂ ಗೊತ್ತಾಗುವು ದಿಲ್ಲವಲ್ಲ! ಇರಲಿ. (ಪ್ರಕಾಶವಾಗಿ) ಅಯ್ಯಾ, ನೀನು ಹೇಳುವುದು ಸರಿ. ಈಗ ಶಸ್ತ್ರಕ್ಕೆ ಕಾಲವಲ್ಲ. ಇಗೋ ಖಡ್ಗವನ್ನು ತೊರೆದೆ. (ಕೆಳಕ್ಕೆ ಬಿಸುಡುವನು.) ಬೇರೆ ಯಾವ ಉಪಾಯವನ್ನು ಹೂಡುವುದಕ್ಕೂ ಈಗ ಅವಕಾಶವಿಲ್ಲ. . . . ನನಗೋಸ್ಕರವೇ ಪ್ರಿಯಮಿತ್ರನು ವಧೆಗೆ ಗುರಿಯಾಗಿರುವಾಗ ನಾನು ಉಪೇಕ್ಷೆ ಮಾಡತಕ್ಕವನಲ್ಲ. ಆಗಲಿ, ನನ್ನ ದೇಹವನ್ನೇ ಒಪ್ಪಿಸಿ ಚಂದನದಾಸನನ್ನು ಬಿಡಿಸುತ್ತೇನೆ. (ಹೋಗುವನು.)

ಪುರುಷ—ಅಮಾತ್ಯರ ಅನುಗ್ರಹ! . . . (ರಾಕ್ಷಸನು ಹೋದ ಬಳಿಕ) ಚಾಣ ಕ್ಯರ ಅಪ್ಪಣೆ ಸಾಂಗವಾಗಿ ನೆರವೇರಿತು! ಮಹಾರಾಜರು ಕೊಲೆ ಗಾರರನ್ನು ಕೊಲ್ಲಿಸಿದರೆಂಬ ಮಾತನ್ನು ಎಷ್ಟು ಸುಲಭವಾಗಿ ನಂಬಿ ಬಿಟ್ಟನು! ಪಾಪ! ಇದೆಲ್ಲ ಮಿತ್ರಶೋಕದ ಪ್ರಭಾವ! . . .

(ಹೋಗುವನು.)

ತೆರೆ.

# ಏಳನೆಯ ಅಂಕ

(ವಧ್ಯಸ್ಥಾನಕ್ಕೆ ಪ್ರವೇಶಿಸುವ ದಾರಿ. ರಂಗದ ಹಿಂಭಾಗದಲ್ಲಿ ಒಂದು ಮೂಲೆಯಲ್ಲಿ ಶೂಲದ ಮರವು ಗೋಚರಿಸುತ್ತಿರುವುದು. ಒಬ್ಬ ಚಂಡಾಲನು ತಮಟೆಯನ್ನು ಬಡಿಯುತ್ತಾ ಪ್ರವೇಶಿಸುವನು.)

ಚಂಡಾಲ—ದಾರಿ, ದಾರಿ. (ವಾದ್ಯವನ್ನು ಬಡಿಯುತ್ತಾ)

ಹರಣವ ವಿಭವವ ಕುಲವ ಕಳತ್ರವ
ಪೊರೆಯುವ ಬಯಕೆ ನಿಮಗಿದ್ದರೆ—
ಪೊರೆಯುವ ಬಯಕೆ ಇದ್ದರೆ, ದೂರಕೆ
ತೊರೆಯಿರಿ ರಾಜದ್ರೋಹವನು—
ತೊರೆಯಿರಿ ರಾಜದ್ರೋಹವನು.

ಇಗೋ, ರಾಜದ್ರೋಹಕ್ಕಾಗಿ ಚಂದನದಾಸಸೆಟ್ಟಿ ವಧ್ಯಸ್ಥಾನಕ್ಕೆ ಹೋಗುತ್ತಿದ್ದಾನೆ. ಇದನ್ನಾದರೂ ನೋಡಿ ನಂಬಿರಿ. (ತಮಟೆಯನ್ನು ಬಡಿಯುವನು.)

(ನೇಪಥ್ಯದಲ್ಲಿ :)

ಧ್ವನಿ—ಈತನ ಬಿಡುಗಡೆಗೆ ಯಾವ ದಾರಿಯೂ ಇಲ್ಲವೇನಯ್ಯಾ ?

ಚಂಡಾಲ—ಒಂದೇ ಒಂದು ದಾರಿಯುಂಟು. ಅಮಾತ್ಯರಾಕ್ಷಸನ ಮನೆಯ ಜನವನ್ನು ಒಪ್ಪಿಸಿಕೊಟ್ಟರೆ ಮಾತ್ರ ಉಂಟು.

(ಮತ್ತೆ ನೇಪಥ್ಯದಲ್ಲಿ :)

ಧ್ವನಿ—ತನ್ನ ಪ್ರಾಣ ಉಳಿಸಿಕೊಳ್ಳುವುದಕ್ಕೆ ಇಂಥ ಅಕಾರ್ಯವನ್ನು ಈತನು ಎಂದಿಗಾದರೂ ಮಾಡಿಯಾನೇನಯ್ಯಾ ?

ಚಂಡಾಲ—ಹಾಗಾದರೆ ಈತನಿಗೆ ಸ್ವರ್ಗಕ್ಕೆ ಒಳ್ಳೆಯ ದಾರಿ ದೊರಕಲಿ ಎಂತ ಕೋರು. ಮಿಕ್ಕದ್ದನ್ನು ಕಟ್ಟಿಕೊಂಡು ನಿನಗೇನು ?

(ಎರಡನೆಯ ಚಂಡಾಲನೂ ವಧ್ಯವೇಷವನ್ನು ಧರಿಸಿದ ಚಂದನದಾಸನೂ ಅವನ ಹೆಂಡತಿಯೂ ಮಗನೂ ಬರುವರು.)

ಚಂದನದಾಸನ ಹೆಂಡತಿ—(ಕಣ್ಣೀರು ಸುರಿಸುತ್ತಾ). ಅಯ್ಯೋ, ಅಯ್ಯೋ, ಪ್ರತಿನಿತ್ಯವೂ ಪಾಪಕ್ಕೆ ಅಂಜಿ ನಡೆಯುತ್ತಿದ್ದವರಿಗೆ ಕೂಡ ಕಳ್ಳರಿಗೆ ತಕ್ಕಂಥ ಮರಣವು ಒದಗಬಹುದೆ? . . . ಹಾ! ಕ್ರೂರಿಗಳ ಕಣ್ಣಿಗೆ ಸಾಧುಗಳು, ಅಸಾಧುಗಳು—ಎಲ್ಲರೂ ಒಂದೇ. (ಸುತ್ತಲೂ ನೋಡಿ) ಕಡೆಗೆ ವಿಷ್ಣುದಾಸಸೆಟ್ಟಿ ಕೂಡ ಇಲ್ಲಿಯ ತನಕ ಜೊತೆಗೆ ಬರಲಿಲ್ಲ. ಇಂಥ ಕಾಲದಲ್ಲಿ ಯಾರೂ ಹತ್ತಿರಕ್ಕೆ ಬರುವುದಿಲ್ಲ.

ಚಂದನದಾಸ—ಆರ್ಯೆ, ಹಾಗೆನ್ನಬಾರದು. ಯಾರು ಬಂದು ತಾನೆ ಏನು ಮಾಡಬಹುದು? ನನ್ನ ಪ್ರಿಯಮಿತ್ರರೆಲ್ಲ ದೂರದಲ್ಲೇ ಹಿಂದಿರುಗಿದರೂ ಅವರ ಕಣ್ಣೀರಿನ ನೋಟ ಇನ್ನೂ ನನ್ನನ್ನು ಹಿಂಬಾಲಿಸುತ್ತಿದೆ. (ನಡೆದು ಬರುವನು.)

೨ ನೆಯ ಚಂಡಾಲ—ಚಂದನದಾಸಸೆಟ್ಟಿ, ಇದೇ ವಧ್ಯಸ್ಥಾನ. ಇನ್ನು ಮನೆಯ ಜನರನ್ನು ಕಳುಹಿಸಿಬಿಡು.

ಚಂದನದಾಸ—ಆರ್ಯೆ, ಮಗನನ್ನು ಕರೆದುಕೊಂಡು ಇನ್ನು ಹಿಂದಿರುಗು. ಇನ್ನು ಮುಂದೆ ನನ್ನನ್ನು ಹಿಂಬಾಲಿಸಬಾರದು.

ಚಂ. ಹೆಂಡತಿ—(ಕಣ್ಣೀರು ತುಂಬಿ) ಆರ್ಯಪುತ್ರ, ನೀವು ಹೊರಟಿರುವುದು ಪರಲೋಕಕ್ಕೆ, ಪರದೇಶಕ್ಕಲ್ಲ. ಆದ್ದರಿಂದ, ಕುಲವಧು ಹಿಂದಿರುಗುವುದಕ್ಕೆ ಈಗ ಸಮಯವಲ್ಲ.

ಚಂದನದಾಸ—ಇದೇನು ಮಾಡಬೇಕೆಂದಿದ್ದೀಯೆ?

ಚಂ. ಹೆಂಡತಿ—ಯಜಮಾನರ ಪಾದಗಳನ್ನು ಹಿಂಬಾಲಿಸಬೇಕೆಂದಿದ್ದೇನೆ. ನನ್ನ ಮೇಲೆ ಅನುಗ್ರಹ ಮಾಡಬೇಕು.

ಚಂದನದಾಸ—ಆರ್ಯೆ, ಈ ಕೆಲಸ ನಿನಗೆ ಉಚಿತವಲ್ಲ. ಈ ಮಗು ಇನ್ನೂ ಲೋಕವ್ಯವಹಾರದ ಹೆಸರನ್ನೇ ಕೇಳಿದವನಲ್ಲ; ಅವನ ಮೇಲೆ ನೀನು ಅನುಗ್ರಹ ಮಾಡು.

ಚಂ. ಹೆಂಡತಿ ದೇವತೆಗಳು ಪ್ರಸನ್ನರಾಗಿ ಅವನ ಮೇಲೆ ಅನುಗ್ರಹ

ಮಾಡಲಿ. ಮಗು, ನಿನ್ನ ತಂದೆಯ ಪಾದಗಳಿಗೆ ಕೊನೆಯ ಸಲ ನಮಸ್ಕಾರಮಾಡು.

ಚಂದನದಾಸನ ಮಗ—(ಪಾದಗಳ ಮೇಲೆ ಬಿದ್ದು) ಅಪ್ಪಾ, ನೀವು ತೊರೆದು ಹೋದಬಳಿಕ ನಾನು ಏನು ಮಾಡಲಿ?

ಚಂದನದಾಸ— ಚಾಣಕ್ಯನಿಲ್ಲದ ದೇಶದಲ್ಲಿ ಬಾಳು, ಮಗು.

೨ ನೆಯ ಚಂಡಾಲ—ಚಂದನದಾಸ ಸೆಟ್ಟಿ, ಶೂಲ ನಟ್ಟಿದೆ. ಇನ್ನು ಸಿದ್ಧವಾಗು.

ಚಂ. ಹೆಂಡತಿ—ಅಣ್ಣಂದಿರಾ, ಕಾಪಾಡಿ, ಕಾಪಾಡಿ.

ಚಂದನದಾಸ—ಆರ್ಯೆ, ಇದೇಕೆ ಹೀಗೆ ಇವರ ಮುಂದೆ ಚೀರುತ್ತೀಯೆ? ದುಃಖಿತರನ್ನು ಕಂಡು ಮರುಗುತ್ತಿದ್ದ ನಂದಮಹಾರಾಜರು ಈಗ ಸ್ವರ್ಗದಲ್ಲಿದ್ದಾರೆ. ಅಲ್ಲದೆ ನಾನು ಸಾಯುವುದು ಮಿತ್ರಕಾರ್ಯಕ್ಕಾಗಿ, ಅನುಚಿತ ಕಾರ್ಯಕ್ಕಲ್ಲ. ಹೀಗೆ ಸಂತೋಷಪಡುವ ಸಮಯದಲ್ಲಿ ಏಕೆ ಅಳುತ್ತೀಯೆ?

೧ ನೆಯ ಚಂಡಾಲ—ಲೋ ಬಿಲ್ವವಕ್ತ್ರ, ಇನ್ನು ಚಂದನದಾಸನನ್ನು ಎಳೆದುಕೊಂಡು ಬಾ. ಮನೆಯವರು ತಮ್ಮಷ್ಟಕ್ಕೆ ತಾವೇ ಹೊರಟು ಹೋಗುತ್ತಾರೆ.

೨ ನೆಯ ಚಂಡಾಲ—ಹಾಗೇ ಮಾಡುತ್ತೇನೆ ಕಣೋ, ವಜ್ರಲೋಮ. (ಮುಂದಕ್ಕೆ ಬರುವನು.)

ಚಂದನದಾಸ—ಅಪ್ಪಾ ಒಂದು ಕ್ಷಣಕಾಲ ತಡೆ. ಮಗುವನ್ನು ಸಂತೈಸಿ ಕಳುಹಿಸುತ್ತೇನೆ. (ಮಗುವನ್ನು ತಬ್ಬಿಕೊಂಡು ನೆತ್ತಿಯನ್ನು ಆಘ್ರಾಣಿಸಿ) ಮಗು, ಸಾವು ಎಂದಿಗೂ ತಪ್ಪಿದ್ದಲ್ಲ; ಈಗ ನಾನು ಸಾಯುವುದು ಮಿತ್ರಕಾರ್ಯಕ್ಕಾಗಿ.

ಚಂ. ಮಗ—ಅಪ್ಪಾ, ಇದನ್ನು ನನಗೆ ತಿಳಿಯಹೇಳಬೇಕೆ? ಇದು ನಮ್ಮ ಕುಲಧರ್ಮವಷ್ಟೆ. (ಪಾದಗಳಿಗೆ ಬೀಳುವನು.)

೧ ನೆಯ ಚಂಡಾಲ—ಇದು ಎಂದಿಗೂ ಮುಗಿಯುವುದೇ ಇಲ್ಲ. ಹಿಡಿದು ಕೊಳ್ಳೋಣ ಬಾ. (ಮುಂದಕ್ಕೆ ಬಂದು ಹಿಡಿದುಕೊಂಡು ಶೂಲದ ಕಡೆಗೆ ಹೊರಡುವನು.)

೨ಂ. ಹೆಂಡತಿ—(ಎದೆಯನ್ನು ಚಚ್ಚಿಕೊಳ್ಳುತ್ತಾ) ಅಪ್ಪಾ, ಉಳಿಸು, ಉಳಿಸು.

(ಥಿಗ್ಗನೆ ರಾಕ್ಷಸನು ಪ್ರವೇಶಿಸುವನು.)

ರಾಕ್ಷಸ—ತಾಯಿ, ಅಂಜಬೇಡ, ಅಂಜಬೇಡ.—ಕೊಲೆಗಾರರಿರಾ, ಚಂದನದಾಸನನ್ನು ಕೊಲ್ಲಕೂಡದು. ಪ್ರಭುಕುಲದ ವಿನಾಶವನ್ನು ಈ ಕಣ್ಣಿನಿಂದ ಸುಮ್ಮನೆ ನೋಡುತ್ತಿದ್ದವನು, ಮಿತ್ರರೆಲ್ಲರೂ ಆಪತ್ತಿಗೆ ಸಿಕ್ಕಿದರೂ ಉತ್ಸವಕಾಲವೆಂದು ಭಾವಿಸಿ ಸುಖವಾಗಿದ್ದವನು, ಎಷ್ಟು ತಿರಸ್ಕಾರಕ್ಕೆ ಗುರಿಯಾದರೂ ಈ ಪ್ರಾಣವನ್ನು ಜಿಪುಣನಂತೆ ರಕ್ಷಿಸಿಕೊಂಡಿದ್ದವನು—ನಾನು. ಈ ನನ್ನ ಕೊರಳಿಗೆ ವಧ್ಯಮಾಲೆಯನ್ನು ಹಾಕಿ; ಮೃತ್ಯುಲೋಕದ ದಾರಿಯನ್ನು ನನಗೆ ತೋರಿಸಿ. (ಮುಂದೆ ಬರುವನು.)

ಚಂದನದಾಸ—(ಕಣ್ಣೀರು ತುಂಬಿ ನೋಡಿ) ಅಮಾತ್ಯರೆ, ಏನು ಇದು?

ರಾಕ್ಷಸ—ನಿನ್ನ ಸಚ್ಚರಿತ್ರದಲ್ಲಿ ಒಂದು ಅಂಶದ ಅನುಕರಣ, ಅಷ್ಟೇ.

ಚಂದನದಾಸ—ಅಮಾತ್ಯರೇ, ಏನು ಮಾಡಿದಿರಿ! ಈ ಎಲ್ಲಾ ಪ್ರಯಾಸವನ್ನೂ ವ್ಯರ್ಥಗೊಳಿಸಿಬಿಟ್ಟಿರಲ್ಲ.

ರಾಕ್ಷಸ—ಮಿತ್ರ, ಸ್ವಾರ್ಥಕ್ಕಾಗಿಯೇ ಮಾಡಿದೆ. ಸಾಕು. ಇನ್ನು ದೂರಬೇಡ. (೧ನೆಯ ಚಂಡಾಲನ ಕಡೆಗೆ ತಿರುಗಿ) ಅಯ್ಯಾ, ಈತನನ್ನು ಬಿಟ್ಟು ನನ್ನನ್ನೇ ಶೂಲಕ್ಕೇರಿಸಿ.

೧ನೆಯ ಚಂಡಾಲ—ಆರ್ಯ ಚಾಣಕ್ಯರ ಅಪ್ಪಣೆಯಿಲ್ಲದೆ ನಾವು ಏನನ್ನೂ ಮಾಡಲಾರೆವು.

ರಾಕ್ಷಸ—ಹಾಗಾದರೆ ಆ ದುರುಳ ಚಾಣಕ್ಯನಿಗೆ ತಿಳಿಸು, ಹೋಗು.

೧ನೆಯ ಚಂಡಾಲ—ಏನೆಂದು ತಿಳಿಸಲಿ?

ರಾಕ್ಷಸ—ಯಾರಿಗೋಸ್ಕರ (ಚಂದನದಾಸನನ್ನು ತೋರಿಸಿ) ಈ ಪೂಜ್ಯನು ಅನ್ಯರ ಪ್ರಾಣಗಳನ್ನು ರಕ್ಷಿಸಿ ನಿನಗೆ ಶತ್ರುವಾದನೋ, ಯಾರಿಗೋಸ್ಕರ ಈತನು ಶೂಲಕ್ಕೇರಲು ಸಿದ್ಧನಾಗಿ ಈ ಕಲಿಕಾಲದಲ್ಲಿ ಕೂಡ ಬುದ್ಧ ಶಿಬಿಗಳ ಚರಿತ್ರೆಯನ್ನು ಏರಿಸಿದನೋ—ಆ ನಾನು, ರಾಕ್ಷಸ, ಬಂದಿದ್ದೇನೆಂದು ಚಾಣಕ್ಯನಿಗೆ ತಿಳಿಸು.

೧ ನೆಯ ಚಂಡಾಲ—ಬಿಲ್ವವಕ್ತ್ರ, ನೀನು ಈ ಸೆಟ್ಟಿಯನ್ನು ಕರೆದುಕೊಂಡು ಹೋಗಿ ಒಂದು ಮರದ ಕೆಳಗೆ ಕುಳ್ಳಿರಿಸಿಕೊಂಡಿರು. ಅಮಾತ್ಯ ರಾಕ್ಷಸನು ಸಿಕ್ಕಿದನೆಂದು ನಾನು ಆರ್ಯಚಾಣಕ್ಯರಿಗೆ ವಿಜ್ಞಾಪಿಸುತ್ತೇನೆ.

೨ ನೆಯ ಚಂಡಾಲ—ಹಾಗೆಯೇ ಮಾಡು. (ಚಂದನದಾಸನನ್ನೂ ಅವನ ಹೆಂಡತಿ ಮಕ್ಕಳನ್ನೂ ಕರೆದುಕೊಂಡು ಹೋಗುವನು.)

೧ ನೆಯ ಚಂಡಾಲ—ಅಮಾತ್ಯರೇ, ತಾವೂ ಬರಬೇಕು. (ಎರಡು ಹೆಜ್ಜೆಯಿಟ್ಟು, ನೇಪಥ್ಯದ ಕಡೆ ತಿರುಗಿ, ಗಟ್ಟಿಯಾಗಿ) ನಂದಕುಲಗಿರಿವಜ್ರಾಯುಧರೂ, ಮೌರ್ಯಕುಲಪ್ರತಿಷ್ಠಾಪನಾಚಾರ್ಯರೂ ಆದ ಆರ್ಯಚಾಣಕ್ಯರಿಗೆ . . . .

ರಾಕ್ಷಸ—ಹಾ! ಇದನ್ನೂ ಕೇಳಬೇಕಾಯಿತೆ?

೧ ನೆಯ ಚಂಡಾಲ—. . . . ಆರ್ಯರ ನೀತಿಪಾಶಕ್ಕೆ ಕಟ್ಟುಬಿದ್ದ ಅಮಾತ್ಯ ರಾಕ್ಷಸನು ಸಿಕ್ಕಿದನೆಂದು ಯಾರಾದರೂ ಅರಿಕೆ ಮಾಡಿ.

(ಚಾಣಕ್ಯನು ಪ್ರವೇಶಿಸುವನು.)

ಚಾಣಕ್ಯ—ಎಲಾ, ಹೇಳು, ಹೇಳು: ಧಗಧಗಿಸುವ ಬೆಂಕಿಯನ್ನು ಬಟ್ಟೆಯ ಸೆರಗಿನಲ್ಲಿ ಕಟ್ಟಿದವರು ಯಾರು? ಭೀಷಣವಾದ ಸಿಂಹವನ್ನು ಪಂಜರಕ್ಕೆ ಕೂಡಿದವರು ಯಾರು?—

೧ ನೆಯ ಚಂಡಾಲ—ನೀತಿನಿಪುಣರಾದ ಆರ್ಯರು.

ಚಾಣಕ್ಯ—ಹಾಗಲ್ಲ. ನಂದಕುಲಶತ್ರುವಾದ ದೈವ ಎಂದು ಹೇಳು.

ರಾಕ್ಷಸ—(ಚಾಣಕ್ಯನು ಬಂದಾಗಿನಿಂದ ಅವನ ಕಡೆ ನೋಡುತ್ತಾ, ತನ್ನಲ್ಲಿ) ಇವನೇ ಆ ಕೌಟಿಲ್ಯ! ಇಷ್ಟು ಬೇಗ ಇಲ್ಲಿಗೆ ಹೇಗೆ ಬಂದನು? ಇಲ್ಲಿ ಏನೋ ಸಂಕೇತವಿದ್ದಿರಬೇಕು. ದುರಾತ್ಮ! . . . (ದಿಟ್ಟಿಸಿ ನೋಡಿ) ಛೇ, ಹಾಗೆನ್ನಬಾರದು. ಇವನು ಮಹಾತ್ಮನೇ ಸರಿ. ನನಗೆ ಶತ್ರುವಾದದ್ದರಿಂದ, ಇವನ ಗುಣಗಳಲ್ಲಿ ನನಗೆ ಮೆಚ್ಚಿಕೆ ಹುಟ್ಟುವುದಿಲ್ಲ.

ಚಾಣಕ್ಯ—(ತಾನೂ ನೋಡಿ, ತನ್ನಲ್ಲಿ) ಅಮಾತ್ಯರಾಕ್ಷಸ! ಕಡೆಗೆ ಕೈಗೆ ಸಿಕ್ಕಿದನೆ! ಈ ಮಹಾತ್ಮನ ಸಲುವಾಗಿಯೇ ಚಂದ್ರಗುಪ್ತನ ಸೇನೆಯೂ

ನನ್ನ ಬುದ್ಧಿಯೂ ಹಲವು ಕಾಲ ನಿದ್ರೆವಿಶ್ರಾಂತಿಗಳಿಲ್ಲದೆ ತೊಳಲಬೇಕಾಯಿತು. (ರಾಕ್ಷಸನ ಬಳಿಗೆ ಬಂದು) ಅಮಾತ್ಯರಾಕ್ಷಸರೇ, ಇದೋ ವಿಷ್ಣುಗುಪ್ತನು ಅಭಿವಂದಿಸುತ್ತಾನೆ.

ರಾಕ್ಷಸ—(ತನ್ನಲ್ಲಿ) ಅಮಾತ್ಯ ಎಂದರೆ ಈಗ ನಾಚಿಕೊಳ್ಳಬೇಕಾಯಿತು. (ಪ್ರಕಾಶವಾಗಿ) ವಿಷ್ಣುಗುಪ್ತರೇ, ಚಂಡಾಲಸ್ಪರ್ಶದಿಂದ ನಾನು ಅಶುಚಿಯಾಗಿದ್ದೇನೆ. ನನ್ನನ್ನು ಮುಟ್ಟಬಾರದು.

ಚಾಣಕ್ಯ—ಅಮಾತ್ಯರೇ, ಇವರು ಚಂಡಾಲರಲ್ಲ. (ಸ್ವಲ್ಪ ನಕ್ಕು, ಸಿದ್ಧಾರ್ಥಕನನ್ನು ತೋರಿಸಿ) ಇವನನ್ನು ತಾವು ನೋಡಿಯೇ ಇದ್ದೀರಿ: ಇವನು ಸಿದ್ಧಾರ್ಥಕ. ಶಕಟದಾಸನಿಗೆ ಸುಳಿವು ತಿಳಿಯದಂತೆ ನಾನು ಹೇಳಿದ ಕಪಟಲೇಖವನ್ನು ಅವನ ಕೈಯಲ್ಲಿ ಬರಸಿದವನು ಈ ಸಿದ್ಧಾರ್ಥಕನೇ. . . . . ಮತ್ತೊಬ್ಬನು ಸಮಿದ್ಧಾರ್ಥಕ; ಅವನೂ ರಾಜಭೃತ್ಯ.

ರಾಕ್ಷಸ—(ತನ್ನಲ್ಲಿ) ಸದ್ಯಕ್ಕೆ ಶಕಟದಾಸನ ಮೇಲೆ ಹುಟ್ಟಿದ್ದ ಸಂಶಯ ತೊಲಗಿತು !

ಚಾಣಕ್ಯ—ಇನ್ನು ಮುಚ್ಚು ಮರೆಯೇಕೆ? . . . ಎಲ್ಲವನ್ನೂ ಹೇಳಿಬಿಡುತ್ತೇನೆ. ಭದ್ರಭಟ ಭಾಗುರಾಯಣಾದಿಗಳು, ಆ ಲೇಖ, ಈ ಸಿದ್ಧಾರ್ಥಕ, ಆ ಮೂರು ಆಭರಣದ ಪಟ್ಟಿಗೆಗಳು, ನಿಮ್ಮ ಮಿತ್ರ ಕ್ಷಪಣಕ, ಜೀರ್ಣೋದ್ಯಾನದಲ್ಲಿ ನಿಮಗೆ ಸಿಕ್ಕಿದ ಮನುಷ್ಯ (ರಾಕ್ಷಸನು ಬೆಚ್ಚುವನು.) ಚಂದನದಾಸನಿಗೆ ಕೊಟ್ಟ ತೊಂದರೆ,— ಇದೆಲ್ಲವೂ ನಾ-ನು (ಸ್ವಲ್ಪ ನಾಚಿಕೆಯನ್ನು ಪ್ರಕಟಿಸಿ) ಚಂದ್ರಗುಪ್ತನಿಗೆ ನಿಮ್ಮ ಸಂಬಂಧವನ್ನು ಒದಗಿಸಬೇಕೆಂದು ಮಾಡಿದ ಉಪಾಯಗಳು.

(ನೇಪಥ್ಯದಲ್ಲಿ "ಚಂದ್ರಗುಪ್ತ ಸಾರ್ವಭೌಮರಿಗೆ ಪರಾಕ್"
ಎಂದು ಶಬ್ದವಾಗುವುದು.)

ಚಾಣಕ್ಯ—ಇಗೋ ನಿಮ್ಮ ದರ್ಶನಕ್ಕೆ ಚಂದ್ರಗುಪ್ತನೇ ಬರುತ್ತಿದ್ದಾನೆ.

ರಾಕ್ಷಸ—(ತನ್ನಲ್ಲಿ) ಏನು ಸಂಕಟ ಒದಗಿತು! ಆಗಲಿ, ಇವನನ್ನು ನೋಡದೆ ವಿಧಿಯಿಲ್ಲ.

(ಚಂದ್ರಗುಪ್ತನು ವೈಭವದಿಂದ ಪರಿವಾರದೊಡನೆ ಪ್ರವೇಶಿಸುವನು.)

ಚಂದ್ರಗುಪ್ತ—(ಚಾಣಕ್ಯನ ಬಳಿಗೆ ಬಂದು) ಆರ್ಯ, ಚಂದ್ರಗುಪ್ತನು ಅಭಿವಂದಿಸುತ್ತಾನೆ.

ಚಾಣಕ್ಯ—ವತ್ಸ, ಸರ್ವಾಶೀರ್ವಾದಗಳೂ ಫಲಿಸಿದುವು. ಇಲ್ಲಿ ಅಮಾತ್ಯಶ್ರೇಷ್ಠರಿದ್ದಾರೆ. ಅವರಿಗೆ ನಮಸ್ಕಾರಮಾಡು.

ರಾಕ್ಷಸ—(ತನ್ನಲ್ಲಿ) ಇನ್ನು ಇವನ ಸಂಬಂಧವುಂಟಾಯಿತೆ?

ಚಂದ್ರಗುಪ್ತ—(ರಾಕ್ಷಸನ ಸಮೀಪಕ್ಕೆ ಬಂದು) ಆರ್ಯ, ಚಂದ್ರಗುಪ್ತನು ಅಭಿವಂದಿಸುತ್ತಾನೆ.

ರಾಕ್ಷಸ—(ನೋಡಿ, ತನ್ನಲ್ಲಿ) ಹುಡುಗನಾಗಿದ್ದಾಗಲೇ ಇವನಿಗೆ ಸಂಪತ್ತಿನ ಕಳೆಯಿತ್ತು. ಸಲಗನಿಗೆ ಹಿಂಡಿನ ಒಡೆತನ ಬರುವಂತೆ ಕ್ರಮವಾಗಿ ರಾಜ್ಯದ ಸಿರಿಯೂ ಇವನ ಕೈಸೇರಿತು. ಈಗ ಕೇಳಬೇಕೆ! (ಸ್ವಲ್ಪ ತಡೆದು, ಮನಸ್ಸಿಲ್ಲದ ಮನಸ್ಸಿನಿಂದ, ಪ್ರಕಾಶವಾಗಿ)ರಾಜನ್, ವಿಜಯೀಭವ.

ಚಂದ್ರಗುಪ್ತ—ಆರ್ಯ, ಜಗತ್ತಿನಲ್ಲಿ ನನಗೆ ಬೇರೆ ಯಾವ ವಿಜಯ ಉಳಿದಿದೆ, ತಾವಿಬ್ಬರೂ ನನ್ನ ರಾಜ್ಯಭಾರದ ಚಿಂತೆಯನ್ನು ಹೊತ್ತಿರುವಾಗ?

ರಾಕ್ಷಸ—(ತನ್ನಲ್ಲಿ) ರಾಕ್ಷಸನು ತನ್ನ ಭೃತ್ಯನಾದನೆಂದು ಭಾವಿಸಿಬಿಟ್ಟನೋ? ಅಲ್ಲ, ಅಲ್ಲ. ಇದು ಅವನ ವಿನಯದ ಮಾತು. ನನ್ನ ಮಾತ್ಸರ್ಯದಿಂದ ಹೀಗೆ ನನಗೆ ತೋರುತ್ತದೆ. . . . ಚಾಣಕ್ಯನು ಯಶಸ್ವಿಯಾದದ್ದು ಯುಕ್ತವೇ ಸರಿ. ನಾನು ಮಾತ್ರ ಅಯೋಗ್ಯನನ್ನು ನೆಚ್ಚಿಕೊಂಡು ಹೀಗೆ ಪತನ ಹೊಂದಿದೆ.

ಚಾಣಕ್ಯ—ಅಮಾತ್ಯರಾಕ್ಷಸರೇ, ಚಂದನದಾಸನು ಬದುಕಬೇಕೋ?

ರಾಕ್ಷಸ—ವಿಷ್ಣುಗುಪ್ತರೇ, ಅವನಿಗೆ ಪ್ರತಿಯಾಗಿ ನನ್ನ ಪ್ರಾಣವನ್ನೊಪ್ಪಿಸುವುದಕ್ಕೆ ಬಂದಿದ್ದೇನೆ; ಅದರಲ್ಲಿ ಸಂದೇಹವೇನು?

ಚಾಣಕ್ಯ—ಅಮಾತ್ಯರೆ, ನೀವು ಸಚಿವಶಸ್ತ್ರವನ್ನು ಧರಿಸದೆಯೇ ಪ್ರಾಣವನ್ನು ಒಪ್ಪಿಸುತ್ತಿರುವುದೊಂದೇ ಸಂದೇಹ. ನಿಮ್ಮ ಪ್ರಾಣವನ್ನು ಸ್ವೀಕರಿಸುವುದಕ್ಕೆ ಚಂದ್ರಗುಪ್ತನಿಗೆ ಇಷ್ಟವಿಲ್ಲ; ನಿಮ್ಮ ಮಂತ್ರಾ

ಲೋಚನೆಯನ್ನು ಅವನು ಕೋರುತ್ತಾನೆ. ನಿಜವಾಗಿಯೂ ಚಂದನ ದಾಸನು ಬದುಕಬೇಕೆಂದಿದ್ದರೆ ಈ ಶಸ್ತ್ರವನ್ನು ಸ್ವೀಕರಿಸಬೇಕು. (ತನ್ನ ಶಸ್ತ್ರವನ್ನು ನೀಡುವನು.)

ರಾಕ್ಷಸ—(ತನ್ನಲ್ಲಿ) ಇದು ಇಲ್ಲಿಗೆ ಬಂದಿತೆ? ಸ್ವರ್ಗಸ್ಥರಾದ ಪ್ರಭುಗಳನ್ನು ತಣಿಸಲೆ, ಮಿತ್ರನ ಪ್ರಾಣವನ್ನು ರಕ್ಷಿಸಲೆ? . . . ಈ ಉಭಯ ಸಂಕಟದಿಂದ ಹೇಗೆ ಪಾರಾಗಲಿ? (ಪ್ರಕಾಶವಾಗಿ) ವಿಷ್ಣುಗುಪ್ತರೇ, ಇದು ಕೂಡದು. ಈ ಶಸ್ತ್ರವನ್ನು—ಅದರಲ್ಲಿಯೂ ತಾವು ಹಿಡಿದಿದ್ದುದನ್ನು—ಧರಿಸುವುದಕ್ಕೆ ನಾನು ಅಯೋಗ್ಯ.

ಚಾಣಕ್ಯ—ಅಮಾತ್ಯರೆ, ಯಾರು ಅಯೋಗ್ಯರು? ನಿಮ್ಮ ಮಹಿಮೆಯ ಭಯದಿಂದಲೇ ಅಲ್ಲವೇ ನಮ್ಮ ಸೇನೆಗಳು ಹೊತ್ತಿಗೆಗೊತ್ತಿಗೆ ಅನ್ನ ನಿದ್ರೆಗಳಿಲ್ಲದೆ ಇನ್ನೂ ತಪಿಸುತ್ತಿರುವುದು? . . . ಈ ಮಾತೆಲ್ಲ ಏಕೆ? ನೀವು ಈ ಶಸ್ತ್ರವನ್ನು ಧರಿಸಿದ ಹೊರತು ಚಂದನದಾಸನಿಗೆ ಪ್ರಾಣದ ಆಸೆಯಿಲ್ಲ.

ರಾಕ್ಷಸ—(ತನ್ನಲ್ಲಿ) . . . ಸಸಿಯಿಂದಲೂ ನಾನು ನೀರೆರೆದು ಬೆಳಸಿದ ಗಿಡಗಳು ಆಗಲೇ ಛೇದಿಸಿಹೋದುವು; ಅವುಗಳ ನೆಳಲಿನ ನೆನಪು ಮಾತ್ರ ಹೋಗುವಂತಿಲ್ಲ. . . . ಆದರೆ, ನನ್ನ ಪ್ರತಿಜ್ಞೆಯನ್ನು ಉಳಿಸಿಕೊಳ್ಳುವುದಕ್ಕೋಸ್ಕರ ಪ್ರಾಣಮಿತ್ರನನ್ನು—ನನ್ನವರ ಪ್ರಾಣವನ್ನು ಕಾಪಾಡಿದ ಕಲಿಯುಗದ ಶಿಬಿಯನ್ನು—ಬಲಿಗೊಡಲೆ? ಛೀ, ಛೀ! ನಾನು ಪ್ರತಿಜ್ಞಾಭಂಗಮಾಡಿ ನರಕಕ್ಕೆ ಇಳಿದರೂ ಚಿಂತೆಯಿಲ್ಲ; ಮಿತ್ರನ ಪ್ರಾಣವನ್ನು ರಕ್ಷಿಸಲೇ ಬೇಕು. . . . ಈ ಶಸ್ತ್ರವನ್ನು ಹಿಡಿಯಲೇಬೇಕು. ಪ್ರಭುಗಳೇ, ಪ್ರಭುಗಳೇ, ನೀವು ದಯಪಾಲಿಸಿದ್ದ ಶಸ್ತ್ರವನ್ನು ಜೀರ್ಣೋದ್ಯಾನದಲ್ಲಿ ನಾನು ಬಿಸುಟಾಗಲೇ ನನಗೆ ನಿಮ್ಮ ಸೇವೆ ಸಂದುಹೋಯಿತು!

ಚಾಣಕ್ಯ—ಅಮಾತ್ಯರೆ, ಇನ್ನೂ ವಿತರ್ಕವೇ?

ರಾಕ್ಷಸ—ವಿಷ್ಣುಗುಪ್ತರೆ, ಮಿತ್ರಸ್ನೇಹವು ಎಂಥ ಕಾರ್ಯವನ್ನೂ ಮಾಡಿಸಿಬಿಡುತ್ತದೆ. ನನಗೆ ಬೇರೆ ದಾರಿಯಿಲ್ಲ. ಇದೋ ದಾಸನಾದೆ.

ಚಾಣಕ್ಯ—(ಹಿಗ್ಗಿ, ರಾಕ್ಷಸನಿಗೆ ಶಸ್ತ್ರವನ್ನು ಒಪ್ಪಿಸಿ) ಚಂದ್ರಗುಪ್ತ, ಚಂದ್ರಗುಪ್ತ, ಅಮಾತ್ಯರು ನಿನ್ನ ಮೇಲೆ ಅನುಗ್ರಹಮಾಡಿದರು. ಇದು ನಿನ್ನ ಭಾಗ್ಯವಿಶೇಷ.

ಚಂದ್ರಗುಪ್ತ—ಇದೆಲ್ಲವನ್ನೂ ಚಂದ್ರಗುಪ್ತನು ಅನುಭವಿಸುತ್ತಿರುವುದು ಆರ್ಯರ ಪ್ರಸಾದದಿಂದ.

(ಚಾರನು ಪ್ರವೇಶಿಸುವನು.)

ಚಾರ—(ಚಾಣಕ್ಯನಿಗೆ) ಪೂಜ್ಯರಿಗೆ ಜಯವಾಗಲಿ. ಭದ್ರಭಟಾದಿ ಸೇನಾಪತಿಗಳು ಮಲಯಕೇತುವನ್ನು ಬಂಧಿಸಿ ಅರಮನೆಯ ಬಾಗಿಲಿಗೆ ಕರೆ ತಂದಿದ್ದಾರೆ. ಮುಂದೆ ಏನು ನಡಸುವುದೋ ಅಪ್ಪಣೆಯಾಗಬೇಕು.

ಚಾಣಕ್ಯ—ಎಲಾ, ಅಮಾತ್ಯ ರಾಕ್ಷಸರಿಗೆ ಅರಿಕೆಮಾಡು. ಈಗ ಅಪ್ಪಣೆ ಮಾಡತಕ್ಕವರು ಅವರು.

ರಾಕ್ಷಸ—(ತನ್ನಲ್ಲಿ) ನನ್ನನ್ನು ದಾಸನನ್ನಾಗಿ ಮಾಡಿಕೊಂಡದ್ದೇ ಸಾಲದೆ ಈಗ ನನ್ನ ಬಾಯಿಂದ ಈ ಬಿನ್ನಹವನ್ನು ಬೇರೆ ಹೊರಡಿಸುತ್ತಿದ್ದಾನೆ ಈ ಕೌಟಿಲ್ಯ. (ಪ್ರಕಾಶವಾಗಿ) ಮಹಾರಾಜ ಚಂದ್ರಗುಪ್ತ, ನಾವು ಮಲಯಕೇತುವಿನ ಬಳಿ ಕೆಲವು ಕಾಲ ಇದ್ದ ವಿಷಯ ನಿನಗೆ ತಿಳಿದಿದೆ. ಆದ್ದರಿಂದ ಅವನ ಪ್ರಾಣವನ್ನು ಉಳಿಸಿಕೊಡಬೇಕು.

(ಚಂದ್ರಗುಪ್ತನು ಚಾಣಕ್ಯನ ಮುಖವನ್ನು ನೋಡುವನು.)

ಚಾಣಕ್ಯ—ಅಮಾತ್ಯರ ಮೊದಲ ಕೋರಿಕೆಗೆ ಅಗತ್ಯವಾಗಿ ಗೌರವ ಕೊಡಬೇಕು. (ಚಾರನನ್ನು ಕುರಿತು) ಎಲಾ, ನಾವು ಹೀಗೆ ಹೇಳಿದೆವೆಂದು ಭದ್ರಭಟಾದಿಗಳಿಗೆ ತಿಳಿಸು: "ಅಮಾತ್ಯ ರಾಕ್ಷಸರು ವಿಜ್ಞಾಪಿಸಿಕೊಂಡ ಮೇರೆಗೆ ಚಂದ್ರಗುಪ್ತ ಮಹಾರಾಜನು ಮಲಯಕೇತುವಿಗೆ ಅವನ ತಂದೆಯ ರಾಜ್ಯವನ್ನು ದಯಪಾಲಿಸಿದ್ದಾನೆ. ಆದ್ದರಿಂದ ನೀವೆಲ್ಲರೂ ಅವನ ಜೊತೆಯಲ್ಲಿ ಹೋಗಿ ರಾಜ್ಯದಲ್ಲಿ ಸ್ಥಾಪಿಸಿ ಹಿಂದಿರುಗತಕ್ಕದ್ದು."—ಹೀಗೆಂದು ತಿಳಿಸು.

ಚಾರ—ಅಪ್ಪಣೆ. (ಹೊರಡುತ್ತಿರುವನು.)

ಚಾಣಕ್ಯ—ಎಲಾ, ಸ್ವಲ್ಪ ತಾ ದುರ್ಗಪಾಲಕನಿಗೆ ಹೇಳು: ಅಮಾತ್ಯ ರಾಕ್ಷಸರು ದೊರೆತದ್ದರಿಂದ ಚಂದ್ರಗುಪ್ತನು ಸಂತುಷ್ಟನಾಗಿ ಚಂದನ ದಾಸಸೆಟ್ಟಿಗೆ ಸರ್ವನಗರಶ್ರೇಷ್ಠಿ ಪದವಿಯನ್ನು ಕೊಟ್ಟಿದ್ದಾನೆ ಎಂದು ನಗರದಲ್ಲೆಲ್ಲಾ ಡಂಗುರಹೊಯಿಸಲಿ. ಅಲ್ಲದೆ, ಆನೆ ಕುದುರೆ ಗಳನ್ನು ಮಾತ್ರ ಉಳಿಸಿಕೊಂಡು, ಸೆರೆಸಿಕ್ಕಿದವರನ್ನೆಲ್ಲಾ ಬಿಡುಗಡೆ ಮಾಡಲಿ.

ಚಾರ—ಪೂಜ್ಯರ ಅಪ್ಪಣೆ. (ಹೊರಟುಹೋಗುವನು.)

ಚಾಣಕ್ಯ—ಇಷ್ಟಕ್ಕೂ, ಇನ್ನು ಮೇಲೆ ನೋಡಿಕೊಳ್ಳುವುದಕ್ಕೆ ಅಮಾತ್ಯ ರಾಕ್ಷಸರೇ ಇರುವಾಗ ನನಗೆ ಇದನ್ನೆಲ್ಲಾ ಕಟ್ಟಿಕೊಂಡು ಏನು?

ರಾಕ್ಷಸ—ವಿಷ್ಣುಗುಪ್ತರೆ, ನಿಮ್ಮ ಹಠ ಗೆದ್ದಿತು. . . . ಚಂದನದಾಸನು ಇಲ್ಲೇ ಸಮೀಪದಲ್ಲಿದ್ದಾನೆ. ಅವನ ಕುಶಲವನ್ನು ಕೇಳುವುದಕ್ಕೆ ನನಗೆ ಈಗಲಾದರೂ ಅವಕಾಶವುಂಟೆ?

ಚಾಣಕ್ಯ—ಅಮಾತ್ಯರೇ, ಇದಕ್ಕೂ ನನ್ನನ್ನು ಕೇಳಬೇಕೆ?

(ರಾಕ್ಷಸನು ಹೋಗುವನು.)

ಚಾಣಕ್ಯ—ಚಂದ್ರಗುಪ್ತ, ಇನ್ನು ರಾಕ್ಷಸನು ನಿನ್ನವನಾದನು. ಮತ್ತೆ ಯಾವ ಪ್ರಿಯವನ್ನು ಬಯಸುತ್ತೀಯೆ?

ಚಂದ್ರಗುಪ್ತ—ನಂದನಿಗ್ರಹ, ಸಾರ್ವಭೌಮಪದವಿ, ರಾಕ್ಷಸಮೈತ್ರಿ—ಇದ ಕ್ಕಿಂತ ಇನ್ನು ಪ್ರಿಯವುಂಟೆ? . . . ಆರ್ಯರ ಆಶೀರ್ವಾದ ವೊಂದು ಮಾತ್ರ ನನಗೆ ರಕ್ಷೆಯಾಗಿರಬೇಕು. (ಪಾದಗಳಿಗೆ ಬೀಳುವನು.)

ಚಾಣಕ್ಯ—(ಮೇಲಕ್ಕೆ ಎತ್ತಿ, ತಲೆ ತಡಹುತ್ತಾ) ಏಳು ವತ್ಸ, ನನ್ನ ಪ್ರಿಯವನ್ನು ನಾನು ಮರೆತೇನೆ? . . . ಇನ್ನು ತಪೋವನಕ್ಕೆ ಹೋಗಲು ನನಗೆ ಅನುಮತಿಯನ್ನು ಕೊಡು.

ತೆರೆ.



# ಕಾವ್ಯಾಲಯ — ಪ್ರಕಾಶಕರು — ಮೈಸೂರು

## ಕನ್ನಡ ಕಾವ್ಯಮಾಲೆ

ಬೆಳೆಯುತ್ತಿರುವ ಕನ್ನಡ ಗ್ರಂಥಮಾಲೆ. ಈ ಮಾಲೆಯಲ್ಲಿ ಕಥೆ, ಕವನ, ಕಾದಂಬರಿ, ನಾಟಕ, ಪ್ರಬಂಧ, ವಿಮರ್ಶೆ, ಭಾಷಣ, ಜೀವನಚರಿತೆ, ಇತ್ಯಾದಿಯಾದ ಬಹುವಿಧದ ಗ್ರಂಥಗಳು ಪ್ರಕಟವಾಗುತ್ತವೆ.

ಪ್ರಕಟನೆಗಳು ಕ್ರೌನ್ ಅಷ್ಟಪತ್ರ ಆಕಾರದಲ್ಲಿ ಸುಮಾರು ೧೦೦ ರಿಂದ ೧೫೦ ಪುಟಗಳಿರುತ್ತವೆ. ಬೆಲೆ, ಸಾದಾ ಪ್ರತಿಯೊಂದಕ್ಕೆ ಸಾಮಾನ್ಯವಾಗಿ ೧೨ ಆಣೆಯಿಂದ ರೂ. ೧—೪ ; ಕ್ಯಾಲಿಕೊ ಪ್ರತಿ ರೂ. ೧—೪ ರಿಂದ ರೂ. ೧—೧೨.

ಇದುವರೆಗೆ ಪ್ರಕಟವಾಗಿರುವ ಗ್ರಂಥಗಳು :

**೧. ಕಿಂದರಿ ಜೋಗಿ ಮತ್ತು ಇತರ ಕಥನ ಕವನಗಳು**— ಕೆ. ವಿ. ಪುಟ್ಟಪ್ಪ, ಎಂ.ಎ. ; ಕ್ರೌನ್ ಅ. viii + ೧೦೪ ; ಬೆಲೆ, ಸಾದಾ ಪ್ರತಿ ರೂ. ೦—೧೨ ; ಕ್ಯಾಲಿಕೊ ಪ್ರತಿ ೧—೪.

ಈ ಸಂಗ್ರಹದಲ್ಲಿ ಬೊಮ್ಮನಹಳ್ಳಿಯ ಕಿಂದರಿ ಜೋಗಿ—ಕುಮುದಿನಿ—ಜಯಸಿಂಹನ ಕೊನೆಗಾಲ—ತಾನಾಜಿ—ರಕ್ತರಜನಿ—ಡೂಲಿ—ನಾಗಿ—ಮಂಜಣ್ಣ ಹೇಳಿದ ಸ್ಥಳಗತೆ—ಕರಿಸಿದ್ದ—ಮರಸು ಬೇಟೆ—ಘಂಟಾಕರ್ಣ : ಈ ೧೧ ಕವಿತೆಗಳಿವೆ. ಇವುಗಳೆಲ್ಲ ಕಥೆಗಳೆ. 'ಶ್ರೀಮಾನ್ ಪುಟ್ಟಪ್ಪನವರ ಕವನಗಳನ್ನು ಓದಿ ಆನಂದಪಡದ ಕನ್ನಡಿಗನಿರಲಾರನು.' ಅವರ 'ಕಿಂದರಿ ಜೋಗಿ'ಯನ್ನು 'ಹಾಡದ ಚಿಕ್ಕ ಮಕ್ಕಳಿಲ್ಲ' ; ಓದದ ವಯಸ್ಕರಿಲ್ಲ. 'ಕುಮುದಿನಿ' ವರ್ಡ್ಸ್‌ವರ್ತ್ ಕವಿಯ 'Laodamia' ಎಂಬ ಕವಿತೆಯಿಂದ ಪ್ರೇರಿತವಾದದ್ದು. 'ಜಯಸಿಂಹನ ಕೊನೆಗಾಲ' ಟೆನಿಸನ್ ಕವಿಯ 'Morte d' Arthur' ಎಂಬ ಸುಪ್ರಸಿದ್ಧ ಕವನದ ಅನುವಾದ. ತಾನಾಜಿಯು ಸಿಂಹಗಡವನ್ನು ವಶಪಡಿಸಿಕೊಂಡ ಕಥೆ 'ತಾನಾಜಿ'ಯಲ್ಲಿ ವಿಸ್ತರಿಸಲ್ಪಟ್ಟಿದೆ. ಇದರ 'ವೀರರಸಕ್ಕೆ ಕಾವೇರದ ಎಳೆಯರಿಲ್ಲ.' 'ರಕ್ತರಜನಿ' ದಶರಥನು ಬೇಟೆಯ ಕಜ್ಜದಲ್ಲಿ ಹಿಂಗಳ ಮುನಿವರನ ಮಗನನ್ನು ಕೊಂದ ಕರುಣರಸಪೂರಿತವಾದ ಕಥೆ. 'ಡೂಲಿ' 'ನಾಗಿ' 'ಮಂಜಣ್ಣ ಹೇಳಿದ ಸ್ಥಳಗತೆ' 'ಕರಿಸಿದ್ದ' 'ಮರಸು ಬೇಟೆ' ಇವುಗಳು ಮಲೆನಾಡಿನ ಜೀವನಕ್ಕೆ ಸಂಬಂಧಪಟ್ಟ ಕರುಣಾಜನಕವಾದ ಕತೆಗಳು. 'ಘಂಟಾಕರ್ಣ' ಭಕ್ತಿಕುರುಡನಾದ ಭಕ್ತನೊಬ್ಬನ ಸಂಕುಚಿತ ಬುದ್ಧಿಯ ಹಾಸ್ಯರಸಪೂರ್ಣವಾದ ವಿಡಂಬನೆ.

**೨. ಸಂನ್ಯಾಸಿ ಮತ್ತು ಇತರ ಕಥೆಗಳು**—ಕೆ. ವಿ. ಪುಟ್ಟಪ್ಪ, ಎಂ.ಎ. ; ಕೌನ್ ಅ. x + ೧೧೦; ಬೆಲೆ, ಸಾದಾ ಪ್ರತಿ ರೂ. ೦—೧೨ ; ಕ್ಯಾಲಿಕೊ ಪ್ರತಿ ರೂ. ೧—೪.

ಈ ಪುಸ್ತಕದಲ್ಲಿ ಸಂನ್ಯಾಸಿ—ಕ್ರಿಸ್ತನಲ್ಲ, ಪಾದ್ರಿಯ ಮಗಳು !—ಈಶ್ವರನೂ ನಕ್ಕಿರಬೇಕು—ಆರಾಣೆ ಮೂರುಕಾಸು—ಯಾರೂ ಅರಿಯದ ವೀರ—ಹೋಳಿಗೆ ಪ್ರತಿಜ್ಞೆ—ಮಾಯದ ಮನೆ- ದೆವ್ವದ ಕಾಟ—ಪಾಪ, ಎಳಗರು ! ಹೀಗೆ ಒಂಬತ್ತು ಸಣ್ಣ ಕಥೆಗಳಿವೆ. ಪುಟ್ಟಪ್ಪನವರ ಸಣ್ಣ ಕಥೆಗಳು ಗ್ರಂಥರೂಪದಲ್ಲಿ ಬರುವುದು ಇದೇ ಮೊದಲು. ಕಥಾಕೋವಿದರಾದ ಶ್ರೀ ಶ್ರೀನಿವಾಸರ ಮುನ್ನುಡಿಯಿಂದ ಕೂಡಿದೆ.

"ಈ ಕತೆಗಳಲ್ಲಿ ಕಾಣುವ ಶಕ್ತಿ ಪುಟ್ಟಪ್ಪನವರ ಕವಿತೆಗಳಲ್ಲಿ ಕಾಣುವ ಶಕ್ತಿಗಿಂತ ಕಡಮೆಯದಲ್ಲ. . . . ಅಂದು ಪದ್ಯದ ಕತೆಯಲ್ಲಿ ಕಂಡ ಶಕ್ತಿಯನ್ನು ನಾವು ಇಂದು ಈ ಗದ್ಯದ ಕತೆಗಳಲ್ಲಿ ಕಾಣಬಹುದಾಗಿದೆ.

". . . ನಾನು ಈ ಕತೆಗಳಿಗೆ ಪುಟ್ಟಪ್ಪನವರ ಸಾಹಿತ್ಯೋಪಾಸನೆಯಲ್ಲಿ ಬಹು ಮುಖ್ಯವಾದ ಸ್ಥಾನವನ್ನು ಕೊಡುತ್ತೇನೆ. ಅವರ ಕವಿತೆಗಳಲ್ಲಿ ಕಾಣುವ ಕನಸಿನ ಶಕ್ತಿಗೆ ನಾನು ಮರುಳಾಗಿರುವುದು ನಿಜ. ಆದರೆ ಅವರು ಬರಿಯ ಅಂಥ ಕನಸುಗಳ ಚಿತ್ರಗಳನ್ನು ಮಾತ್ರ ರಚಿಸಿದ್ದರೆ ಅವರ ಸಾಹಿತ್ಯ ಸೇವೆ ಅಸಮಗ್ರವಾಗಿ ನಿಲ್ಲುತ್ತಿತ್ತು. ಆ ಸೇವೆಗೆ ಅವರ 'ಮಲೆನಾಡಿನ ಚಿತ್ರಗಳು,' ಅದಕ್ಕಿಂತಲೂ ಹೆಚ್ಚಾಗಿ ಈ ಪುಸ್ತಕದ 'ದೆವ್ವದ ಕಾಟ'ದಂಥ ಕಥೆಗಳು, ಸಮಗ್ರತೆಯನ್ನು ಕೊಡುತ್ತವೆ. ಈ ದೆವ್ವದ ಕಾಟದ ಕಥೆಯಲ್ಲಿ ಬರುವ ಜನರೆಲ್ಲ ಜೀವನದಿಂದ ಕತೆಗೆ ನಡೆದು ಬಂದಂತಿದೆ. ರಾಯರು, ಅವರ ಸೇವಕ; ಮಂತ್ರಹಾಕುವ ಬ್ರಾಹ್ಮಣ, ಕಾವಲು ಕಾಯುವ ಜನ; ದೆವ್ವಕ್ಕೆ ಹೆದರುವ ಪೋಲೀಸಿನವ, ಹೆದರದ ಮುಸಲ್ಮಾನ ಇನ್‌ಸ್ಪೆಕ್ಟರು; ಇವರು ಬರುವ ಹೋಗುವ ರೀತಿ, ನುಡಿಯುವ ನಡೆಯುವ ರೀತಿ ಇದೆಲ್ಲ ಒಂದು ನಾಡಿನ ಜೀವನವನ್ನೇ ನಮ್ಮ ಮುಂದೆ ತಂದಿರಿಸುತ್ತವೆ. ಪ್ರಕೃತಿಯ ಸೌಂದರ್ಯದ ಹರಹನ್ನು ಆತುರದಿಂದ ಕಾಣುವ ಈ ಲೇಖಕರ ಕಣ್ಣು ಜನರ ಬಾಳುವೆಯ ಹರಹನ್ನೂ ಅದೇ ಕುತೂಹಲಭಾವದಿಂದ ನೋಡಿದೆ."

—ಶ್ರೀಮಾನ್ ಶ್ರೀನಿವಾಸರ ಮುನ್ನುಡಿಯಿಂದ.

**೩. ಚಿತ್ರಾಂಗದಾ**—ಕೆ. ವಿ. ಪುಟ್ಟಪ್ಪ, ಎಂ.ಎ. ; ಕೌನ್ ಅ. vi + ೯೭ ; ಬೆಲೆ, ಸಾದಾ ಪ್ರತಿ ರೂ. ೦—೧೨ ; ಕ್ಯಾಲಿಕೊ ಪ್ರತಿ ರೂ. ೧—೪.

"ಚಿತ್ರಾಂಗದೆಯ ಕಥೆ ವ್ಯಾಸಮಹಾಭಾರತದ ಮಹಾಸಾಗರದಲ್ಲಿ ಬಿಂದುಮಾತ್ರವಾಗಿ ಕಾಣಿಸಿಕೊಂಡಿದೆ. ಕನ್ನಡ 'ಜೈಮಿನಿ ಭಾರತ'ದಲ್ಲಿ ಅರ್ಜುನ ಬಭ್ರುವಾಹನರ ಕಾಳೆಗವನ್ನು ವರ್ಣಿಸುವಾಗ ಲಕ್ಷ್ಮೀಶನು ಪ್ರಾಸಂಗಿಕವಾಗಿ ಆಕೆಯ ಪಾತ್ರವನ್ನು ನಮ್ಮ ಮುಂದೆ ತರುತ್ತಾನೆ. ಅಲ್ಲಿ ನಮ್ಮ ಮುಂದೆ ಬರುವವಳು ಬಭ್ರುವಾಹನನ ತಾಯಿ. ಅಲ್ಲಿಯ ಆಕೆಯ ಚಿತ್ರವನ್ನು 'ಉತ್ತರ ಚಿತ್ರಾಂಗದಾ' ಎಂದು ಕರೆಯಬಹುದು. ವಂಗ ಕವಿ ರವೀಂದ್ರನಾಥ ಠಾಕೂರರ ಇಂಗ್ಲಿಷಿಗೆ ಭಾಷಾಂತರವಾಗಿರುವ 'ಚಿತ್ರಾ' ನಾಟಕದಲ್ಲಿ ಚಿತ್ರಾಂಗದೆಯ ಪೂರ್ವ ಜೀವನವನ್ನು ಚಿತ್ರಿಸಿದ್ದಾರೆ. ಅಲ್ಲಿ

ಆಕೆಯನ್ನು ಶೃಂಗಾರದ ಪರಿಪೂರ್ಣತೆಯಲ್ಲಿ ಚಿರಸ್ಥಾಯಿಯನ್ನಾಗಿ ಮಾಡಿದ್ದಾರೆ. ಅವರ ಚಿತ್ರವನ್ನು 'ಪೂರ್ವ ಚಿತ್ರಾಂಗದಾ' ಎಂದು ಕರೆಯಬಹುದು. . . .

'ಪೂರ್ವ ಚಿತ್ರಾಂಗದೆ'ಯನ್ನು ಚಿತ್ರಿಸುವ ಕೆಲವು ಸನ್ನಿವೇಶಗಳಿಗೆ ಈ ಕಾವ್ಯ ಠಾಕೂರರಿಗೆ ಋಣಿಯಾಗಿದೆ. ಮದನನು ವರವನ್ನೀಯುವುದರಲ್ಲಿಯೂ, ಆತನಿಗೂ ಚಿತ್ರಾಂಗದೆಗೂ ನಡೆಯುವ ಸಂಭಾಷಣೆಯಲ್ಲಿಯೂ ಓದುಗರು ಅದನ್ನು ಚೆನ್ನಾಗಿ ಗುರುತಿಸಬಹುದು. 'ಉತ್ತರ ಚಿತ್ರಾಂಗದೆ'ಯ ಚಿತ್ರದಲ್ಲಿ ಲಕ್ಷ್ಮೀಶನ ಋಣವು ಅಷ್ಟು ಮೇಲಿದ್ದು ಕಾಣದಿದ್ದರೂ ಮೇಧಾವಿಯಾದ ಓದುಗನಿಂದ ಅದು ತಪ್ಪಿಸಿಕೊಳ್ಳಲಾರದೆಂದು ತೋರುತ್ತದೆ. ಆದರೂ ಈ ಚಿತ್ರಾಂಗದೆ ಆ ಚಿತ್ರಗಳೆರಡನ್ನೂ ಕೂಡಿಸಿ ತಯಾರಾದವಳಲ್ಲ. ಅವುಗಳಿಂದ ಮೂಡಿ ಸೃಷ್ಟಿಯಾಗಿದ್ದಾಳೆ. ಗಣಿತಕರ್ಮವಾಗಿಲ್ಲ; ಕಲಾಕೃತಿಯಾಗಿದ್ದಾಳೆ.''

—ಶ್ರೀಮಾನ್ ಪುಟ್ಟಪ್ಪನವರ 'ಅರಿಕೆ'ಯಿಂದ.

ಸುಮಾರು ೨,೫೦೦ ಪಂಕ್ತಿಗಳಿಂದ ಕೂಡಿರುವ ಈ ಗ್ರಂಥ ಸಂಪೂರ್ಣವಾಗಿ ಸರಳ ರಗಳೆಯ ಛಂದಸ್ಸಿನಲ್ಲಿ ರಚಿತವಾದ ಮೊದಲನೆಯ ಆಧುನಿಕ ಮಹಾಕಾವ್ಯವೆನ್ನಬಹುದು.

**೪-೫. ಕಾನೂರು ಸುಬ್ಬಮ್ಮ ಹೆಗ್ಗಡಿತಿ**—ಕೆ. ವಿ. ಪುಟ್ಟಪ್ಪ, ಎಂ.ಎ.; ಭಾಗ ೧—೨ (ಅಧ್ಯಾಯ ೧—೧೮) ಕ್ರೌನ್ ಅ. viii + ೧೯೬; ಬೆಲೆ, ಸಾದಾ ಪ್ರತಿ ರೂ. ೧—೮; ಕ್ಯಾಲಿಕೊ ಪ್ರತಿ ರೂ. ೨—೮.

**೬-೭.** ಭಾಗ ೩—೪ (ಅ. ೧೯—೩೭); ಕ್ರೌನ್ ಅ. vi + ೧೯೭—೩೯೮: ಬೆಲೆ, ಸಾದಾ ಪ್ರತಿ ರೂ. ೧—೮; ಕ್ಯಾಲಿಕೊ ಪ್ರತಿ ರೂ ೨—೮.

**೮-೯.** ಭಾಗ ೫—೬ (ಅ. ೩೮—೫೮); ಕ್ರೌನ್ ಅ. vi + ೩೯೯—೬೦೪; ಬೆಲೆ, ಸಾದಾ ಪ್ರತಿ ರೂ. ೧—೮; ಕ್ಯಾಲಿಕೊ ಪ್ರತಿ ರೂ. ೨—೮.

**೧೦-೧೧.** ಭಾಗ ೭—೮ (ಅ. ೫೯—೮೧); ಕ್ರೌನ್ ಅ. vi+೬೦೫—೮೦೭; ಬೆಲೆ, ಸಾದಾ ಪ್ರತಿ ರೂ. ೧—೮; ಕ್ಯಾಲಿಕೊ ಪ್ರತಿ ರೂ. ೨—೮.

ಒಟ್ಟು: ೮ ಭಾಗಗಳು, ೮೦೭ ಪುಟಗಳು; ಬೆಲೆ, ಸಾದಾ ಪ್ರತಿ ರೂ. ೬—೦; ಕ್ಯಾಲಿಕೊ ಪ್ರತಿ ರೂ. ೧೦—೦.

''ಗಾತ್ರದಲ್ಲಿಯಲ್ಲದೆ ಗ್ರಂಥವಿಷಯದಲ್ಲಿಯೂ ಈ ಕಾದಂಬರಿಯು ಕನ್ನಡಕ್ಕೆ ಹೊಸದಾಗಿದೆ. . . . ಮಲೆನಾಡಿನ ಗೌಡರು, ಅವರ ಹೆಂಡಿರು ಮಕ್ಕಳು, ಅವರ ಆಳು ಹೋಳುಗಳು ಇಂಥ ವ್ಯಕ್ತಿಗಳ ಸುತ್ತ ಈ ಕಾದಂಬರಿಯ ಜೀವನ ಕಥೆಯು ತನ್ನ ಹರವಾದ ಜೇಡಬಲೆಯನ್ನು ಹೆಣೆದಿರುವುದು. ಕಾದಂಬರಿಕಾರರು ಕಥನದ ಏಕಸೂತ್ರತೆಗಾಗಿ ಆಯ್ದುಕೊಂಡ ಮುಖ್ಯ ಕಥಾನಕವು ತುಂಬಾ ವಿಶಾಲವೂ ಚಿತ್ತಾಕರ್ಷಕವೂ ಆಗಿರುವುದೆಂಬ ವಿಷಯದಲ್ಲಿ ಸಂಶಯವೇ ಇಲ್ಲ.

ಮಹಾಕಾದಂಬರಿಯಲ್ಲಿ ಇರಬೇಕಾದ ಬಾಳಿನ ಹರಹು ಇಲ್ಲಿ ನಿಶ್ಚಯವಾಗಿ ಇದೆ. ಜೀವನದ ವಿವಿಧತೆಯ ಹಾಗೂ ಜಟಿಲತೆಯ ಅರಿವು ಓದುಗನಿಗೆ ಆಗುವುದು. ಕಾದಂಬರಿಗೆ

ಹೆಸರನ್ನು ಕೊಟ್ಟ ಸುಬ್ಬಮ್ಮನ ಕರುಣ ಕಥೆಯು ಮೊದಲಿಂದ ಕಡೆವರೆಗೂ ಕಲಾಮಯವಾಗಿ ಚಿತ್ರಿತವಾಗಿದೆ. ಮಲೆನಾಡಿನ ಚರಾಚರ ಸೃಷ್ಟಿಯೆಲ್ಲ ಈ ಕಥಾನಕದ ಪರದೆಯ ಮೇಲೆ ಕಣ್ಣೆದಿರು ಕಟ್ಟಿದಂತೆ ನಿಲ್ಲುವುದು. . . . ಒಮ್ಮೊಮ್ಮೆ ಚಿತ್ರಪಟದ ದೃಶ್ಯಗಳಂತೆ ಎಳೆದುತಂದ ರೋಮಾಂಚಕಾರಿಗಳು (Thrills) ಬರುವುದುಂಟು. ಬಹುಶಃ ಮಲೆನಾಡಿನ ಬಾಳು ಅಂಥವುಗಳಿಂದ ತುಂಬಿದೆಯೆನ್ನಬೇಕು. . . .

ಈ ಕಾದಂಬರಿಯ ಪಾತ್ರಪೋಷಣೆಯಲ್ಲಿ ಕಂಡುಬರುವ ವೈವಿಧ್ಯವೂ ಸಜೀವತೆಯೂ ಹೊಸ ಕನ್ನಡಕ್ಕೆ ಹೆಮ್ಮೆಯ ವಿಷಯಗಳು. ಸತ್ಯಸೃಷ್ಟಿಯ ಅವೆಷ್ಟು ವ್ಯಕ್ತಿಗಳು 'ಕರತಲ ರಂಗಭೂಮಿ'ಯಾದ ಈ ಕಾದಂಬರಿಯಲ್ಲಿ ಸುಳಿದಾಡುವವು! ಮುಖ್ಯ ಪಾತ್ರಗಳಾದ ಚಂದ್ರಯ್ಯಗೌಡರು, ಸೇರೆಗಾರ ರಂಗಪ್ಪಸೆಟ್ಟರು, ಸುಬ್ಬಮ್ಮ, ನಾಗಮ್ಮನವರು ಮೊದಲಾದವರಂತೂ ಸರಿಯೇ. ಅಮುಖ್ಯರಾದ 'ಬಾಡುಗಳ್ಳ' ಸೋಮ, ಸೆರೆಗುಡುಕ ಓಬಯ್ಯ, ಬೈರ, ಜಾಕಿ, ಗಂಗೆ ಮೊದಲಾಗಿ ಹಲವಾರು ಪಾತ್ರಗಳು ತಮ್ಮ ಧೈರ್ಯ, ಹಾಸ್ಯ, ಅಜ್ಞಾನ, ಮೂಢತನ, ದುಶ್ಚಟ ಮುಂತಾದ ಮಾನವಗುಣಗಳನ್ನು ಜೀವಂತವಾಗಿ ತೋರಿಸುತ್ತವೆ.

ಈ ಕಾದಂಬರಿಯ ಎಲ್ಲಕ್ಕಿಂತ ಹೆಚ್ಚಿನ ಹಿರಿಮೆಯೆಂದರೆ ಇದರಲ್ಲಿ ನಿರ್ಮಾಣವಾದ ಮಲೆನಾಡಿನ ಜೀವಂತ ವಾತಾವರಣ. ಅಲ್ಲಿಯ ಜನಜೀವನದ ಮುಖ್ಯ ಅಂಶಗಳು ವಿವರ ವಿವರವಾಗಿ ಸ್ವಾರಸ್ಯವಾಗಿ ಚಿತ್ರಿತವಾಗಿವೆ. ಅಲ್ಲಿಯ ಆ ಬಗೆಬಗೆಯ ಷಿಕಾರಿಗಳು, 'ದೆಯ್ಯ'ದ ಹುಚ್ಚು, ಕಳ್ಳಿನ ಮೋಹ, ಹಿಂಸೆಯ ಹೆಚ್ಚಳ ಮುಂತಾದ ವಿಷಯಗಳನ್ನು ತಾವು ಕಂಡು ಅನುಭವಿಸಿ ಆತ್ಮೀಕರಿಸಿ ಶ್ರೀ ಪುಟ್ಟಪ್ಪನವರು ಅತ್ಯಂತ ರಮ್ಯವಾಗಿ ಚಿತ್ರಿಸಿರುವರು. ಈ ವಿಷಯದಲ್ಲಿ ಅವರು ಮಾಡಿದ ಕಲಾನಿರ್ಮಾಣವು ಜಗತ್ತಿನ ಉಚ್ಚ ವಾಙ್ಮಯದ ಜೊತೆಗೆ ಧೈರ್ಯವಾಗಿ ನಿಲ್ಲಬಲ್ಲುದು ಎಂದು ನಾವು ಹೆಮ್ಮೆಯಿಂದ ಹೇಳಬಹುದು. ಅಲ್ಲದೆ ಗ್ರಂಥಕರ್ತರ ಒಟ್ಟಿನ ಬರವಣಿಗೆಯಲ್ಲಿಯೂ . . . ಒಂದು ನಿರರ್ಗಳವಾದ ಶಕ್ತಿವಾಹಿನಿಯಿದೆ, ಚಿತ್ರಕಾರನ ವಿವರನಿಷ್ಠವಾದ ದೃಷ್ಟಿಯಿದೆ. ಉತ್ತಮಕವಿಯ ಕಲ್ಪನಾಶಕ್ತಿಯಿದೆ, ತಡೆಯಿಲ್ಲದ ಶೈಲಿಯಿದೆ. . . . ಶ್ರೀ ಪುಟ್ಟಪ್ಪನವರು ಈ ಕಾದಂಬರಿಯನ್ನು ಬರೆದು ಕನ್ನಡಕ್ಕೆ ಮರೆಯಲಾಗದ ಕಾಣಿಕೆಯನ್ನು ನೀಡಿದ್ದಾರೆ.''

—ಪ್ರಬುದ್ಧ ಕರ್ಣಾಟಕ.

''ಒಟ್ಟನಲ್ಲಿ ಒಮ್ಮೆ ಓದಿ ಮುಗಿಸುವ ಕಾದಂಬರಿಯಲ್ಲ ಇದು. ಹತ್ತಿರದಲ್ಲಿಟ್ಟುಕೊಂಡು ಬೇಕುಬೇಕಾದಾಗ ಓದಿಯೋದಿ ಆನಂದವನ್ನನುಭವಿಸಬಹುದಾದ ಗ್ರಂಥವಿದು.''

—ಕತೆಗಾರ.

**೧೨. ನನ್ನ ದೇವರು ಮತ್ತು ಇತರ ಕಥೆಗಳು—ಕೆ. ವಿ. ಪುಟ್ಟಪ್ಪ,** ಎಂ.ಎ.; ಕ್ರೌ ೯ ಅ. vi + ೧೦೭; ಬೆಲೆ, ಸಾದಾ ಪ್ರತಿ ರೂ. ೦—೧೨; ಕ್ಯಾಲಿಕೊ ಪ್ರತಿ ರೂ. ೧—೪.

ಈ ಸಂಕಲನದಲ್ಲಿ ನನ್ನ ದೇವರು—ಸಾಲದ ಮಗು—ಆದರ್ಶ ಸಾಧನೆ—ಔದಾರ್ಯ—ಗಂಟು ಅಥವಾ ಗುಪ್ತಧನ—ಮೀನಾಕ್ಷಿಯ ಮನೇ ಮೇಷ್ಟರು—ಧನ್ವಂತರಿಯ ಚಿಕಿತ್ಸೆ—ವೈರಾಗ್ಯದ ಮಹಿಮೆ: ಈ ಎಂಟು ಕಥೆಗಳಿವೆ.

'ಸಂನ್ಯಾಸಿ'ಯಲ್ಲಿ ಕಂಡುಬಂದ ಶ್ರೀ ಪುಟ್ಟಪ್ಪನವರ ಕಥನ ಕಲೆಯೂ ಜೀವನದ ಅನುಭವವೂ ಈ ಕಥೆಗಳಲ್ಲಿ ಬೆಳೆದಿರುವುದನ್ನೂ ವಿಸ್ತಾರಗೊಂಡಿರುವುದನ್ನೂ ಮನಗಾಣಬಹುದು.

ಎಂಟು ವರ್ಷದ ಆಳು ಸುಬ್ಬ ಗದ್ದೆಯ ಕೆವಿಯ ನಡುವೆ ಕೆಸರು ಮೆತ್ತಿಕೊಂಡು ಸತ್ತು ಬಿದ್ದದ್ದನ್ನು ನೋಡಿ, ಅಯ್ಯೋ, ನನ್ನ ಮುನ್ನೂರು ರೂಪಾಯಿ ಮನೆಗೆ ಬಂತೇ ! ಎಂದು ಗೋಳಿಡುವ ಕಠೋರ ಹೃದಯದ ಗೌಡರು ; ನಿಧಿಯ ಆಸೆಯಿಂದಲೂ ಮೌಢ್ಯದಿಂದಲೂ ಬೈರಾಗಿಯ ಮೋಸಕ್ಕೆ ತುತ್ತಾಗಿ ಜೀವಾವಧಿ ದುಡಿದ ತನ್ನ ಒಡವೆ ವಸ್ತುಗಳನ್ನೆಲ್ಲ ಕಳೆದುಕೊಳ್ಳುವ ಮಂಜಣ್ಣ—ಇವರೇ 'ಸಾಲದ ಮಗು' ಮತ್ತು 'ಗಂಟು ಅಥವಾ ಗುಪ್ತಧನ'ದ ಪಾತ್ರಗಳು. ಜೀವನದಲ್ಲಿ ಕಣ್ಣು ತೆರೆಯುತ್ತಿರುವ ಯುವಕನಿಗೆ ಆದರ್ಶ ಎಷ್ಟು ಸುಲಭವಾಗಿ ತೋರುತ್ತದೆಯೊ ಅದರ ಸಾಧನೆ ಅಷ್ಟು ಕಷ್ಟವಿದೆ. ವಾಸ್ತವ ಜಗತ್ತಿನಲ್ಲಿ ಕಾಲಿಟ್ಟ ಮೇಲೆ ಆದರ್ಶದಿಂದ ಕ್ರಮೇಣ ದೂರವಾಗುತ್ತ ಆಗುತ್ತ ಕಡೆಗೆ ಹಾಸ್ಯಾಸ್ಪದವಾಗುವ ಮಟ್ಟಿಗೆ ವಸ್ತುಸ್ಥಿತಿಯೊಡನೆ ರಾಜಿಮಾಡಿಕೊಳ್ಳುತ್ತೇವೆ. ಈ ಭಾವವೇ 'ಆದರ್ಶ ಸಾಧನೆ'ಯ ಕಥಾವಸ್ತು. 'ಮೀನಾಕ್ಷಿಯ ಮನೇ ಮೇಷ್ಟರು' ಒಂದು ರಮ್ಯವಾದ ಕಥೆ. 'ಧನ್ವಂತರಿಯ ಚಿಕಿತ್ಸೆ' ಅತ್ಯಂತ ಪರಿಣಾಮಕಾರಿಯಾದ ಭಾವಪ್ರಧಾನವಾದ ಕಥೆ. ರೈತನ ಬಡತನ, ಬೇಗೆ ರೋಗಗಳ ನಿವಾರಣೆಗಾಗಿ ನೂರಾರು ಉಪನ್ಯಾಸಗಳು ಮಾಡಲಾರದ ಕಾರ್ಯವನ್ನು ಈ ಕಥೆ ಮಾಡಬಲ್ಲದು. ರೈತನ ರೋಗ ಬಡತನಗಳ ಮೂಲವನ್ನು ಕತೆಗಾರರು ಇಲ್ಲಿ ಅಪೂರ್ವವಾದ ದರ್ಶನದಿಂದಲೂ ಅದ್ವಿತೀಯವಾದ ಕಲ್ಪನೆಯಿಂದಲೂ ತೋರಿದ್ದಾರೆ. ಸಮಾಜದ ಕಣ್ಣು ತೆರೆಯಲು ಇಂದು ಇಂಥ ಕಥೆಗಳೇ ಬೇಕು. 'ವೈರಾಗ್ಯದ ಮಹಿಮೆ'ಯಲ್ಲಿ ಧರ್ಮದ ಮುಸುಕಿನಲ್ಲಿ ನಡೆಯುವ ಅತ್ಯಾಚಾರಗಳು ವರ್ಣಿತವಾಗಿವೆ.

* * * * *

". . . . 'ನನ್ನ ದೇವರು' ಕಲಾದೃಷ್ಟಿಯಿಂದ ಅತ್ಯುತ್ತಮವಾದ ಕಥೆ. . . . ಗಹನವಾದ ವಿಷಯ, ಲಲಿತವಾದ ಶೈಲಿ, ಇದರ ಮೇಲೆ ಕವಿಸಹಜವಾದ ರಸನಿರೂಪಣೆ ಈ ಎಲ್ಲ ಗುಣವಿಶೇಷದಿಂದ ಈ ಕಥೆ ಅತ್ಯುತ್ತಮವಾದ ಒಂದು ಗದ್ಯಾತ್ಮಕ ಭಾವಗೀತೆಯಂತಿದೆ.

ಶ್ರೀಯುತ ಪುಟ್ಟಪ್ಪನವರು ತಮ್ಮದೇ ಆದ ಒಂದು 'ಕಥನಪದ್ಧತಿ'ಯನ್ನು ಬೆಳೆಸಿಕೊಂಡಿದ್ದಾರೆ. ಕಥೆಯ ವಸ್ತು, ಪಾತ್ರ, ಶೈಲಿ ಯಾವುದನ್ನು ನೋಡಿದರೂ ಅಲ್ಲಿ ಅವರನ್ನು ನಾವು ಗುರುತಿಸಬಹುದು. ಅಂತಹ ಒಂದು ವಿಶಿಷ್ಟರೀತಿಯ ಸ್ವತಂತ್ರ ಮಾರ್ಗದಲ್ಲಿ ಬೆಳೆದ ಅವರ ಕಥನಪದ್ಧತಿಗೆ 'ನನ್ನ ದೇವರು ಮತ್ತು ಇತರ ಕಥೆಗಳು' ಸಾಕ್ಷಿಯೆಂಬಂತಿವೆ."

—ಪ್ರಬುದ್ಧ ಕರ್ಣಾಟಕ.

"There are only a few authors—as far as story writers in Kannada are concerned—who can bring emotion and satire to their full bloom, even in their short stories. And amongst those who can, Mr. Puttappa occupies admittedly a prominent place.

The eight stories of the book are, in a word, eight gems."

—The Indian P. E. N.

**೧೩. ಅಹಲ್ಯೆ**—ಪು. ತಿ. ನರಸಿಂಹಾಚಾರ್, ಬಿ.ಎ.; ಕ್ರೌನ್ ಅ. xxiv + ೧೨೩ ; ಬೆಲೆ, ಸಾದಾ ಪ್ರತಿ ರೂ. ೧—೪ ; ಕ್ಯಾಲಿಕೊ ಪ್ರತಿ ರೂ. ೧—೧೨.

ಇದೊಂದು ' ಗೀತರೂಪಕ.' ' ನಾಟಕದ ಹೆಸರೇ ಸೂಚಿಸುವಂತೆ ಇದು ಅಹಲ್ಯೆಯ ಜೀವನದ ಕಥೆ.'

"ಇಂದ್ರ—ಅಹಲ್ಯೆಯರ ಸಂಗತಿ ಭಾರತೀಯ ಸಾಹಿತ್ಯಕ್ಕೆ ಚಿರಪರಿಚಿತವಾದದ್ದು. . . . . ಇವರ ಕಥೆ ಖಚಿತವಾದ ಆಕಾರವನ್ನು ತಾಳಿ ಮೊದಲು ಕಾಣಿಸಿಕೊಳ್ಳುವುದು ವಾಲ್ಮೀಕಿಯ ರಾಮಾಯಣದಲ್ಲಿ. ಇಲ್ಲಿ ಅದು ಕೇವಲ ವ್ಯಾಮೋಹದ ವೃತ್ತಾಂತವಾಗಿ ಮುಗಿದಿಲ್ಲ. . . . ಶ್ರೀರಾಮನ ದರ್ಶನದಿಂದ ಅಹಲ್ಯೆ ಪರಿಶುದ್ಧಳಾದಳೆಂಬುದೇ ವಾಲ್ಮೀಕಿಗೆ ಮುಖ್ಯವಾದ ವಿಷಯ ; . . . ಇಂದ್ರನು ಅಹಲ್ಯೆಯನ್ನು ಏಕೆ ಕಾಮಿಸಿದನೆಂಬುದನ್ನೂ ಅವನ ಮೋಹಕ್ಕೆ ಅವಳು ಹೇಗೆ ಒಳಗಾದಳೆಂಬುದನ್ನೂ ವಾಲ್ಮೀಕಿ ವಿಸ್ತರಿಸಿಲ್ಲ. . . . ವಾಲ್ಮೀಕಿ ನಾಲ್ಕು ಮಾತುಗಳಲ್ಲಿ ರೇಖಿಸಿ ಕೈಬಿಟ್ಟ ಪ್ರಸಂಗ ವಾಚಕರ ಕುತೂಹಲವನ್ನು ಕೆರಳಿಸದೆ ಬಿಡುವುದಿಲ್ಲ. ಅಹಲ್ಯೆ, ಇಂದ್ರ, ಗೌತಮ—ಈ ಮೊದಲಾದವರ ನಡೆವಳಿಕೆಯ ರೀತಿಯೇನು, ಅರ್ಥವೇನು ? ಇವರನ್ನು ಉದ್ರೇಕಿಸಿದ ಭಾವಗಳೇನು ? ಇವರ ಕಥೆಯಲ್ಲಿ ಅಡಕವಾಗಿರುವ ಸಮಸ್ಯೆಯೇನು?—ಈ ಪ್ರಶ್ನೆಗಳು ಮನಸ್ಸನ್ನು ಕೆಲವು ಕಾಲವಾದರೂ ಬಾಧಿಸುತ್ತವೆ. ವಾಲ್ಮೀಕಿಯಿಂದ ಈಚೆಗೆ ಅನೇಕ ಪುರಾಣಕಾರರು ಈ ಕಥೆಯನ್ನು ನಿರೂಪಿಸಿದ್ದೀನೋ ನಿಜ. ಆದರೆ ಅವರಿಗೆಲ್ಲ ಇಲ್ಲಿ ಮುಖ್ಯವಾಗಿ ಕಂಡದ್ದು ಶ್ರೀರಾಮನ ಮಹಿಮೆ. . . . ಆಧುನಿಕ ಯುಗದ ಕವಿಯೊಬ್ಬರಿಗೆ, ಕೊನೆಯಲ್ಲಿ ರಾಮನಿಂದ ನಡೆದ ಅದ್ಭುತದ ಜೊತೆಗೆ ಅದರ ಹಿಂದಿನ ಪ್ರಸಂಗಗಳೂ ರಸಭಾವ ಗರ್ಭಿತವಾಗಿ ಕಾಣಿಸಿದುವು. ಅವರ ಕಲ್ಪನೆಯ ರಂಗಮಂಟಪದಲ್ಲಿ ವಾಲ್ಮೀಕಿಯ ಪಾತ್ರಗಳು ಜೀವಕಳೆ ತುಂಬಿ ನಿಂತರು, ತಮ್ಮ ಹಿಂದಿನ ಕಥೆಯನ್ನು ಸವಿಸ್ತರವಾಗಿ ಅಭಿನಯಿಸಿದರು. ಅದರ ರೀತಿ ಹೇಗೆಂಬುದನ್ನು ನಮ್ಮ ಮುಂದಿರುವ ಕೃತಿ ತೋರಿಸುತ್ತದೆ.

ಇದರಲ್ಲಿ ಹಿನ್ನೆಲೆ ಮುನ್ನೆಲೆಯೆಂಬ ಭೇದವಿಲ್ಲದೆ, ಪ್ರಕೃತಿಯೊಂದಿಗೆ ಪಾತ್ರಗಳೂ ಪಾತ್ರಗಳೊಂದಿಗೆ ಪ್ರಕೃತಿಯೂ ಸಮತಾನವಾಗಿ ಎದೆ ಮಿಡಿಯುವುದನ್ನು ನೋಡಬಹುದು. ಈ ನಾಟಕದ ಉದ್ದಕ್ಕೂ ಬರುವ ವರ್ಣನೆಗಳಂತೂ ಉಜ್ವಲ ಪ್ರತಿಭೆಯಿಂದಲ್ಲದೆ ಹೊಮ್ಮುವುದು ಅಸಂಭವ. ಅದರಲ್ಲೂ ಪೂರ್ವಾಂಕದ ನಾಲ್ಕನೆಯ ದೃಶ್ಯದಲ್ಲಿ ಅದರ ಕ್ರಿಯೆಗೆ ಸಮುಚಿತವಾದ ಹಿನ್ನೆಲೆಯಾಗಿ ಬರುವ ಕಾರ್ಗತ್ತಲೆಯ ವರ್ಣನೆಯೂ, ಇದಕ್ಕೆ ಪ್ರತಿಚಿತ್ರವಾಗಿ ಐದನೆಯ ದೃಶ್ಯದಲ್ಲಿ ಕಲ್ಪನೆಯ ಪರಾಕಾಷ್ಠೆಯನ್ನು ಮುಟ್ಟಿ ಬಂದಿರುವ ಚಂದ್ರೋದಯದ ವರ್ಣನೆಯೂ ಯಾರನ್ನು ತಾನೆ ಬೆರಗು

ಪಡಿಸುವುದಿಲ್ಲ! ಇನ್ನು ಅವಿರತವಾಗಿ ಗೋಚರಿಸುವ ನಾಟಕಕಾರರ ಸೂಕ್ಷ್ಮದೃಷ್ಟಿ, ಧ್ವನಿ ಪೂರ್ಣವಾಗಿ ಮಾತುಗಳನ್ನೂ ಸಂಗತಿಗಳನ್ನೂ ಜೋಡಿಸುವ ಶಕ್ತಿ, ಛಂದಸ್ಸಿನಲ್ಲಿ ಬಗೆಬಗೆಯ ಪ್ರಯೋಗಗಳನ್ನು ನಡಸಿ ಹೊಸ ಸೊಗಸುಗಳನ್ನು ಹಲವೆಡೆಗಳಲ್ಲಿ ಸಾಧಿಸಿರುವ ಕೌಶಲ—ಈ ಮೊದಲಾದದ್ದನ್ನೆಲ್ಲಾ ಇಲ್ಲಿ ವಿವರಿಸಲು ಅವಕಾಶವಿಲ್ಲ; . . .''

—ಶ್ರೀಮಾನ್ ತೀ. ನಂ. ಶ್ರೀಕಂಠಯ್ಯನವರ ಪ್ರಸ್ತಾವನೆಯಿಂದ.

**೧೪. ಮೂರು ನಾಟಕಗಳು**—ಕೆ. ವಿ. ಪುಟ್ಟಪ್ಪ, ಎಂ.ಎ.; ಕ್ರೌನ್ ಅ. ೧೧೫; ಬೆಲೆ, ಸಾದಾ ಪ್ರತಿ ರೂ. ೧—೪; ಕ್ಯಾಲಿಕೊ ಪ್ರತಿ ರೂ. ೧—೧೨.

ಈ ಗ್ರಂಥದಲ್ಲಿ 'ಮಹಾರಾತ್ರಿ,' 'ಶ್ಮಶಾನ ಕುರುಕ್ಷೇತ್ರಂ,' 'ಜಲಗಾರ' ಈ ಮೂರು ನಾಟಕಗಳಿವೆ.

**೧೫. ರಾಕ್ಷಸನ ಮುದ್ರಿಕೆ**—ತೀ. ನಂ. ಶ್ರೀಕಂಠಯ್ಯ, ಎಂ.ಎ.; ಕ್ರೌನ್ ಅ. viii + ೧೦೮. ಬೆಲೆ, ಸಾದಾ ಪ್ರತಿ ರೂ. ೧—೦; ಕ್ಯಾಲಿಕೊ ಪ್ರತಿ ರೂ. ೧—೮.

'ರಾಕ್ಷಸನ ಮುದ್ರಿಕೆ' ವಿಶಾಖದತ್ತನ ಸಂಸ್ಕೃತ ನಾಟಕದ ರೂಪಾಂತರ.

## ಕಾವ್ಯಾಲಯದ ಇತರ ಪ್ರಕಟನೆಗಳು

**೧. ಬೊಮ್ಮನಹಳ್ಳಿಯ ಕಿಂದರಿಜೋಗಿ**—ಕೆ. ವಿ. ಪುಟ್ಟಪ್ಪ, ಎಂ.ಎ.; ಕ್ರೌನ್ ಅ. ೧೮. ಬೆಲೆ, ೨ ಆಣೆ.

**೨. ಯಮುನ ಸೋಲು ಮತ್ತು ಇತರ ನಾಟಕಗಳು**—ಕೆ. ವಿ. ಪುಟ್ಟಪ್ಪ, ಎಂ.ಎ.; ಕ್ರೌನ್ ಅ. ೮೮. ಬೆಲೆ, ರೂ. ೦—೧೨.

ಈ ಗ್ರಂಥದಲ್ಲಿ 'ಯಮುನ ಸೋಲು,' 'ವಾಲ್ಮೀಕಿಯ ಭಾಗ್ಯ' ಮತ್ತು 'ನನ್ನ ಗೋಪಾಲ' ಈ ಮೂರು ನಾಟಕಗಳಿವೆ. ಈ ನಾಟಕಗಳು ಬೇರೆ ಬೇರೆಯಾಗಿಯೂ ದೊರೆಯುತ್ತವೆ. ಪ್ರತಿಯೊಂದರ ಬೆಲೆ ನಾಲ್ಕು ಆಣೆಗಳು.

**೩. ಪರಮಾಣು (The Atom)**—ಜಿ. ಆರ್. ರಂಗಸ್ವಾಮಿ, ಎಂ.ಎ.; ಕ್ರೌನ್ ಅ. ೧೧ + ೨೧೨ (೧೪ ಚಿತ್ರಗಳೊಡನೆ); ಬೆಲೆ, ಸಾದಾ ಪ್ರತಿ ರೂ. ೨—೦; ಕ್ಯಾಲಿಕೊ ಪ್ರತಿ ರೂ. ೨—೪.

''ವಿಜ್ಞಾನದ ಹೊಸ ಪ್ರಮೇಯವನ್ನೊಳಗೊಂಡ ಇಂತಹ ಗ್ರಂಥವನ್ನು ರಂಗಸ್ವಾಮಿಯವರು ಆಬಾಲವೃದ್ಧರಿಗೂ ತಿಳಿಯುವಂತೆ ಸುಲಭಶೈಲಿಯಲ್ಲಿ ಬರೆದು ಕನ್ನಡ

ವಿಜ್ಞಾನದ ಅಭ್ಯುದಯಕ್ಕೂ ಪ್ರಸಾರಕ್ಕೂ ಮಾಡಿರುವ ಮಹೋಪಕಾ[illegible] ಶ್ಲಾಘನೀಯವಾಗಿದೆ.'

—ಪ್ರಬುದ್ಧ ಕರ್ಣಾಟಕ.

"The book under review is a welcome addition to the very few scientific books in the Kannada language. This is the first of its kind in which any author has attempted to lay before the Kannada Public a complete picture of Modern Physics. . . .

The book certainly contains much more matter than is suggested by the title and the author has very well succeeded in this major attempt to bring into the compass of one single book the whole field of Modern Physics. The book is well illustrated and nicely got up."

—*The Hindu.*

**೪. ತೆರೆಮರೆಯ ಚಿತ್ರಗಳು** (ಏಕಾಂಕ ನಾಟಕ)—ಎಂ. ವಿ. ಸೀತಾರಾಮಯ್ಯ, ಎಂ.ಎ.; ಕ್ರೌನ್ ಅ. ii + ೪೯ ; ಬೆಲೆ, ರೂ. ೦—೮.

"ಸಾಮಾಜಿಕ ನಾಟಕ ನಿರ್ಭೀತಿಯಿಂದ ಸಾಮಾಜಿಕ ಸಮಸ್ಯೆಗಳನ್ನು ಎದುರಿಸಲು ಪ್ರಯತ್ನಿಸಬೇಕು, ಸಮಾಜದ ಓರೆಕೋರೆಗಳನ್ನು ಎದ್ದು ಕಾಣುವಂತೆ ಚಿತ್ರಿಸಿ ತೋರಬೇಕು. . . . ನಮ್ಮ ಸಮಾಜದ ಹಲವಾರು ವೇಶ್ಯೆಯರ ಪೂರ್ವಸ್ಥಿತಿಯ ಚಿತ್ರಗಳ ಮೇಲೆ ತೆರೆ ಮುಸುಕಿದೆ; "ತೆರೆಮರೆಯ ಚಿತ್ರಗಳ" ತೆರೆ ತೆಗೆದಮೇಲೆ ಅವುಗಳ ಸ್ವಸ್ವರೂಪ ತಿಳಿಯಲಾದೀತು, ಸತ್ಯ ಬಯಲಾದೀತು. ಪ್ರಕೃತ ನಾಟಕದಲ್ಲಿ ವೇಶ್ಯೆಯ ಮಗಳಾದ ಸುಶೀಲೆಯ ಜೀವನ-ಚಿತ್ರಗಳ ಮೇಲೆ ಕವಿದಿದ್ದ ತೆರೆಯನ್ನು ತೆಗೆದುಹಾಕಿ ಅವಳ ಸ್ವಸ್ವರೂಪ ವ್ಯಕ್ತಗೊಳ್ಳುವಂತೆ ಮಾಡಿದೆ."

—ಗ್ರಂಥಕರ್ತರ ಹಿನ್ನುಡಿಯಿಂದ.

**೫. ದಕ್ಷಿಣ ಆಫ್ರಿಕದ ಸತ್ಯಾಗ್ರಹ**—ಗಾಂಧೀಜಿ (ಅನುವಾದಕರು: ಎಸ್. ವಿ. ಕೃಷ್ಣಮೂರ್ತಿರಾವ್, ಬಿ.ಎಸ್‌ಸಿ., ಎಲ್‌ಎಲ್.ಬಿ.); ಭಾಗ ೧. ಕ್ರೌನ್ ಅ. ೧೬+೧೪೪ ; ಬೆಲೆ, ಸಾದಾ ಪ್ರತಿ ರೂ. ೦—೧೨ ; ಖದ್ದರ್ ಪ್ರತಿ ರೂ. ೧—೪.

**೬. ಸಾಹಿತ್ಯದ ಜೀವಾಳ** (ಅನುವಾದ)—ಗೊರೂರು ರಾಮಸ್ವಾಮಿ ಐಯಂಗಾರ್ ; ಡೆಮಿ ಅ. ii+೬೪ ; ಬೆಲೆ, ರೂ. ೦—೧೨.

ಇದರಲ್ಲಿ ಷೋಪನ್‌ಹೌರನ 'ಲೇಖನ ಕಲೆ', 'ತನ್ನಷ್ಟಕ್ಕೆ ತಾನು ಆಲೋಚನೆ ಮಾಡುವುದು', 'ಗ್ರಂಥಗಳು ಮತ್ತು ಅವುಗಳ ವ್ಯಾಸಂಗ' ಮತ್ತು 'ಶೈಲಿ' ಎಂಬ ನಾಲ್ಕು ಪ್ರಬಂಧಗಳ ಅನುವಾದವಿದೆ.

ಯಾವ ಕನ್ನಡ ಪುಸ್ತಕ ಬೇಕಾದರೂ ನಮಗೆ ಬರೆಯಿರಿ.

---

**ಕಾವ್ಯಾಲಯ * ಪ್ರಕಾಶಕರು * ಮೈಸೂರು**